# ನವರತ್ನ ರಾಮರಾವ್ ಅವರ ಸಾಹಿತ್ಯಾಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)


ಅಧ್ಯಯನಕಾರರು

ವೇದಾಂತ



ಮಾರ್ಗದರ್ಶಕರು

ಡಾ. ಅಮರೇಶ್. ಎಸ್

ಪ್ರವಾಚಕರು

ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ







ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೮-೦೯

# "ನವರತ್ನ ರಾಮರಾವ್ ಅವರ ಸಾಹಿತ್ಯಾಧ್ಯಯನ"

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಎಂ.ಫಿಲ್. ಸಂಪ್ರಬಂಧ)

ಅಧ್ಯಯನಕಾರರು
ವೇದಾಂತ



ಮಾರ್ಗದರ್ಶಕರು
ಡಾ.ಅಮರೇಶ್. ಎನ್
ಪ್ರವಾಚಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೮-೦೯

# ಪ್ರಮಾಣ ಪತ್ರ

**'ನವರತ್ನ ರಾಮರಾವ್ ಅವರ ಸಾಹಿತ್ಯಾಧ್ಯಯನ'** ಎಂಬ **ಶೀರ್ಷಿಕೆಯ** ಸಂಪ್ರಬಂಧವನ್ನು **ಡಾ.ಅಮರೇಶ್. ಎನ್** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್, ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

**ವೇದಾಂತ**

ಅಧ್ಯಯನಕಾರರು

ಕನ್ನಡ ಸಾಹಿತ್ಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ

## ದೃಢೀಕರಣ ಪತ್ರ

'ನವರತ್ನ ರಾಮರಾವ್ ಅವರ ಸಾಹಿತ್ಯಾಧ್ಯಯನ' ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಎಂ.ಫಿಲ್, ಪದವಿಗಾಗಿ ವೇದಾಂತ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಸಂಪ್ರಬಂಧವು ಮೂಲವಾಗಿದ್ದು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

**ಡಾ.ಅಮರೇಶ್. ಎನ್**
ಮಾರ್ಗದರ್ಶಕರು ಮತ್ತು ಪ್ರವಾಚಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪರಿವಿಡಿ

## ಅಧ್ಯಾಯ - ಒಂದು

# ಅಧ್ಯಯನದ ಉದ್ದೇಶ, ಮಹತ್ವ, ವ್ಯಾಪ್ತಿ ಮತ್ತು ವಿಧಾನ

### ಪ್ರಸ್ತಾವನೆ

ಬ್ರಿಟೀಷ್ ವಸಾಹತು ಆಡಳಿತ ನೆಲೆಗೊಂಡ ಮೇಲೆ ಸಮಾಜದಲ್ಲಿ ಹೊಸ ಬೆಳವಣಿಗೆಗಳು ಕಾಣಿಸಿದವು. ಸಾಂಪ್ರದಾಯಿಕ ಸಮಾಜಗಳು ಬದಲಾವಣೆಗೆ ಒಳಗಾದವು. ಆಧುನಿಕತೆ ಜನ ಸಮುದಾಯಗಳಲ್ಲಿ ಪ್ರವೇಶಿಸಿತು. ಹಳೆ ತಿಳುವಳಿಕೆಗಳು ಕಾಣಿಸಿಕೊಂಡ ಹೊಸ ತಿಳಿವಳಿಕೆಗಳ ನಡುವೆ ಸಂಘರ್ಷಗಳ ಏರ್ಪಟ್ಟವು. ಹೊಸ ಶಿಕ್ಷಣ ಪದ್ಧತಿ ಜಾರಿಯಾದ ಮೇಲೆ ಹಲವು ಜ್ಞಾನಕ್ಷೇತ್ರಗಳ ವಿಷಯಗಳನ್ನು ವಿದ್ಯಾರ್ಥಿ ಸಮುದಾಯಗಳು ಪಡೆಯಲಾರಂಭಿಸಿದವು. ಇದರಿಂದ ಶೈಕ್ಷಣಿಕವಾಗಿ ಸಮಾಜ ಹೊಸ ರೂಪವನ್ನೇ ಪಡೆಯಿತು. ಇದರಂತೆ ಹಲವು ಕ್ಷೇತ್ರಗಳು ಹೊಸ ರೂಪವನ್ನು ಅಳವಡಿಸಿಕೊಂಡು ಬದಲಾವಣೆಯನ್ನು ಕಂಡವು. ಸಮಾಜ ಬದಲಾದಂತೆ ಸಾಹಿತ್ಯದಲ್ಲಿ ಈ ಹೊಸ ಸಮಾಜ ಸೃಷ್ಟಿಯಾಗತೊಡಗಿತು. ಪಶ್ಚಿಮದ ಆಧುನಿಕ ಸಾಹಿತ್ಯ ಪ್ರಕಾರಗಳು ಕನ್ನಡದಲ್ಲಿ ಹುಟ್ಟಿಕೊಂಡು ಅವುಗಳ ಮೂಲಕ ಅನುಭವ ಅಭಿವ್ಯಕ್ತಿ ಪಡೆಯಿತು. ಹಲವು ಸಾಹಿತ್ಯ ಪ್ರಕಾರಗಳಲ್ಲಿ ಸಾಹಿತ್ಯ ಅಭಿವ್ಯಕ್ತಿ ಪಡೆಯಲು ತೊಡಗಿದಂತೆ, ಆಧುನಿಕ ಕನ್ನಡ ಸಾಹಿತ್ಯ ಸಮೃದ್ಧವಾಗಿ ಬೆಲೆಯಲು ಮೊದಲ ತಲೆಮಾರಿನ ಆಧುನಿಕ ಕನ್ನಡ ಸಾಹಿತ್ಯದ ಬೆಳೆ ಪ್ರಬುದ್ಧವಾಗಿ ಬೆಳೆಯಲು ಆ ಸಂದರ್ಭವೂ ಕಾರಣವಾಗಿತ್ತು. ಬ್ರಿಟೀಷರ ಆಡಳಿತ, ಆಧುನಿಕತೆಯ ಪ್ರವೇಶದಿಂದ ಸಾಂಪ್ರದಾಯಿಕ ಸಮಾಜ ಸಂಘರ್ಷವನ್ನು ಸೃಷ್ಟಿಸಿತು. ಇದರ ಅನುಭವವು ಸಾಹಿತ್ಯಕ್ಕೆ ವಸ್ತುವಾಯಿತು. ಪಶ್ಚಿಮದ ಆಧುನಿಕ ತಿಳುವಳಿಕೆ, ಒಂದು ಕಡೆ ಪರಂಪರಾಗತವಾದ ತಿಳುವಳಿಕೆ, ಇನ್ನೊಂದು ಕಡೆ ಇವುಗಳ ಮುಖಾಮುಖಿಯಿಂದ ಹೊಸ ತಿಳುವಳಿಕೆಯನ್ನೇ ನಮ್ಮ ಸಾಹಿತಿಗಳು ಸೃಷ್ಟಿಸಿಕೊಂಡರು. ಇದರಿಂದಾಗಿ ದೊಡ್ಡ ಪ್ರಮಾಣದ ಅನುಭವವನ್ನು ಅಭಿವ್ಯಕ್ತಿಸಲು ಮೊದಲ ತಲೆಮಾರಿನ ಲೇಖಕರು ಹಲವು ಪ್ರಕಾರಗಳನ್ನು ಬಳಸಿದರು, ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ

ಅಭಿವ್ಯಕ್ತಿಸುವುದು ಅವರಿಗೆ ಅನಿವಾರ್ಯವಾಯ್ತೇನೋ. ಇದು ಸಾಹಿತ್ಯಿಕವಾಗಿ, ಸಾಂಸ್ಕೃತಿಕವಾಗಿ ಸಮೃದ್ಧ ಸಾಹಿತ್ಯ ರಚನೆಗೆ ಕಾರಣವಾಯಿತು.

'ಆತ್ಮಕಥೆ' ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಒಂದು ಮತ್ತು ಅನನ್ಯವಾದದ್ದು. ಸಾಹಿತಿಗಳು ತಮ್ಮ ಕೊನೆಯ ಹಂತದಲ್ಲಿ, ಈ ಪ್ರಕಾರದಲ್ಲಿ ತಮ್ಮ ಬದುಕಿನ ವಿಧಾನವನ್ನು ಅಭಿವ್ಯಕ್ತಿಸಲು ಪ್ರಯತ್ನಿಸಿದರು. ಮೊದಲು ತಲೆಮಾರಿನ ಪ್ರಮುಖರೆಲ್ಲರೂ ಆತ್ಮಕಥೆಯನ್ನು ಬರೆಯುವುದನ್ನು ಗೌರವದ ಸಂಗತಿಯಾಗಿ ಭಾವಿಸಿರಬೇಕು, ಹಲವು ಪ್ರಕಾರಗಳಲ್ಲಿ ತಮ್ಮ ಅನುಭವಗಳನ್ನು ಅಭಿವ್ಯಕ್ತಿಸಿದ್ದರೂ 'ಆತ್ಮಕಥೆ'ಯನ್ನು ಬರೆಯುವುದಕ್ಕೆ ನಿರಾಸಕ್ತಿಯನ್ನು ತೋರಿಸಲಿಲ್ಲ. ಸಾಮಾನ್ಯವಾಗಿ 'ಆತ್ಮಕಥೆ'ಯನ್ನು ಸಾಂಸ್ಕೃತಿಕವಾಗಿ ದೊಡ್ಡ ಸಾಧನೆ ಮಾಡಿದವರು ಬರೆಯುವರು, ಬಡತನವಿರಲಿ, ಕಷ್ಟವನ್ನು ಅನುಭವಿಸಿರಲಿ, ಅನ್ಯಾಯಕ್ಕೆ ಒಳಗಾಗಿರಲಿ ಎಲ್ಲವನ್ನು ಎದುರಿಸಿ ಪ್ರಾಮಾಣಿಕವಾಗಿ, ಗೌರವಯುತವಾಗಿ ಬದುಕಿ ದೊಡ್ಡ ಸಾಧನೆ ಮಾಡಿದ್ದು ಸಾಮಾನ್ಯ ಸಂಗತಿಯಾಗುವುದಿಲ್ಲ. ಅದನ್ನು ಬರೆದು ದಾಖಲಿಸುವುದರಿಂದ ಮುಂದಿನ ಪೀಳಿಗೆಗೆ 'ದಾರಿದೀಪ'ವಾಗಬಲ್ಲದೆಂಬ ವಿಶ್ವಾಸವಿತ್ತು. ಮೊದಲ ತಲೆಮಾರಿನ ಲೇಖಕರಿಗೆ ಗಾಂಧೀಜಿ ಅವರ 'ಸತ್ಯಾನ್ವೇಷಣೆ' ಎಂಬ ಆತ್ಮಕಥೆಯು ಪ್ರಭಾವ ಬೀರಿತ್ತು. ಅದರ ವಿನ್ಯಾಸ ಒಂದು ಮಾದರಿಯಾಗಿ ಕಂಡಿರಬೇಕು. ಒಟ್ಟಿನಲ್ಲಿ ಸಾಹಿತಿಗಳು ಆತ್ಮಕಥೆ ಬರೆಯುವುದನ್ನು ಮರೆಯಲಿಲ್ಲ. ಕನ್ನಡದಲ್ಲಿ 'ಆತ್ಮಕಥೆ' ಪ್ರಕಾರ ಸಮೃದ್ಧವಾಗಿದೆ. ಕುವೆಂಪು, ಮಾಸ್ತಿ, ಕಾರಂತ, ಗೋರೂರು, ಮುಂತಾದವರ 'ಆತ್ಮಕಥೆ'ಗಳು ಬೃಹತ್ ಆಗಿವೆ. ನಮ್ಮ ಸಮಾಜವನ್ನು ಚರಿತ್ರೆಯನ್ನು ಅರಿಯಲು ಈ ಆತ್ಮಕಥೆಗಳು ಪ್ರಮುಖ ಆಕರಗಳಾಗಿ ನಿಂತಿವೆ.

## ಅಧ್ಯಯನದ ಉದ್ದೇಶ ಮತ್ತು ಮಹತ್ವ

ಕನ್ನಡ ಸಾಹಿತ್ಯದಲ್ಲಿ 'ಆತ್ಮಕಥೆ' ಒಂದು ವಿಶಿಷ್ಟ ಪ್ರಕಾರವಾಗಿದೆ. ಸಾಮಾನ್ಯವಾಗಿ ಸಾಂಸ್ಕೃತಿಕವಾಗಿ ಮಹತ್ವದ ಸ್ಥಾನ ಪಡೆದವರು 'ಆತ್ಮಕಥೆ' ಬರೆಯುತ್ತಾರೆ. ದೊಡ್ಡ ಸಾಧನೆ ಮಾಡಿರುವ ವ್ಯಕ್ತಿಯ ಬದುಕು ಹೇಗಿರುತ್ತದೆ? ಆ ವ್ಯಕ್ತಿಯ ದಿನನಿತ್ಯದ ಚಟುವಟಿಕೆಗಳೇನು? ಸಮಾಜ, ಸಂಸಾರ, ಕುಟುಂಬಗಳ ನಡುವೆ ಹೇಗೆ ಜೀವಿಸಿರುತ್ತಾನೆ? ಬಾಲ್ಯ, ಯೌವ್ವನವನ್ನು ಹೇಗೆ ಕಳೆದಿರಬಹುದು? ಇಷ್ಟು ದೊಡ್ಡ ಸಾಧನೆ ಮಾಡಿರುವ ವ್ಯಕ್ತಿ ಲೌಕಿಕದಲ್ಲಿ ಹೇಗಿರಬಹುದು? ಎಂಬ ಕುತೂಹಲಗಳು ಸಾಮಾನ್ಯವಾಗಿ ಜನರಿಗಿರುತ್ತದೆ. ಇದು ಸಹಜವಾದದ್ದು. ಇಂತಹ ಕುತೂಹಲವನ್ನು ಸಾಮಾನ್ಯರು ಹೊಂದಿರುತ್ತಾರೆ ಎಂಬ ಅರಿವು ಆತ್ಮಕಥೆಗಾರನಿಗೂ ಇರುತ್ತದೆ. ಇದು ಒಂದು ಅಂಶವಾದರೆ, ಇನ್ನೊಂದು 'ಆತ್ಮಕಥೆ'ಯಲ್ಲಿ ಆತ್ಮಕಥೆಗಾರ ಒಂದು ಶತಮಾನದ ಸಮಾಜದಲ್ಲಿ ಬದುಕಿರುತ್ತಾನೆ. ಆ ಶತಮಾನದಲ್ಲಿ ಆದ ಬದಲಾವಣೆಗಳ ಜತೆ ಬದುಕಿರುತ್ತಾನೆ. ಆ ಶತಮಾನದ ಚರಿತ್ರೆಯನ್ನು ಅರಿಯಲು ಆತ್ಮಕಥೆಗಳಿಂದ ಸಾಧ್ಯವಾಗುತ್ತದೆ. ಈ ಅಂಶಗಳನ್ನು ಅರಿಯುವುದು ಮಹತ್ವದ ವಿಷಯವಾಗಿದೆ. ಸಾಂಸ್ಕೃತಿಕ ಲೋಕವನ್ನು ಆತ್ಮಚರಿತ್ರೆಕಾರನ

ಮೂಲಕ ಗ್ರಹಿಸಲು ಸಾಧ್ಯವಾಗುತ್ತದೆ ಎಂಬುದು ಮಹತ್ವದ ಸಂಗತಿ, ಈ ಉದ್ದೇಶದಿಂದ ಅಧ್ಯಯನ ಮಾಡಲಾಗುವುದು.

## ವ್ಯಾಪ್ತಿ

ಯಾವುದೇ ಒಂದು ವಿಷಯದ ಅಧ್ಯಯನವು ನಿರ್ದಿಷ್ಟವಾದ ಚೌಕಟ್ಟು ಹೊಂದಿರಬೇಕಾಗುತ್ತದೆ. ಇಂತಹ ವ್ಯಾಪ್ತಿಯು ಅಧ್ಯಯನಕ್ಕ ಅನುಕೂಲತೆಯನ್ನು ಮಾಡಿಕೊಡುತ್ತದೆ. ಕನ್ನಡದಲ್ಲಿ ಹಲವು ಲೇಖಕರಿಂದ ಆತ್ಮಕಥೆಗಳು ಬಂದಾವದರೂ ಕೆಲವು ನೆನಪುಗಳು ಕೃತಿಯು ಅಧ್ಯಯನದ ಕೇಂದ್ರಬಿಂದುವಾಗಿದೆ. ಲೇಖಕರ ಸಣ್ಣಕತೆಗಳು ಅಧ್ಯಯನದ ವ್ಯಾಪ್ತಿಗೆ ಒಳಪಡುತ್ತದೆ. ಅದರಂತೆ ನವರತ್ನ ರಾಮರಾವ್ ಅವರ ಸಾಹಿತ್ಯಾಧ್ಯಯನ ಎಂಬ ವಿಷಯಕ್ಕೆ ಸಂಬಂಧಿಸಿದ ಬರವಣಿಗೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ಈ ಅಧ್ಯಯನ ವಿಷಯಕ್ಕೆ ಪೂರಕವಾದ ಕೃತಿಗಳನ್ನು ಅಧ್ಯಯನಕ್ಕೆಒಳಪಡಿಸಿಕೊಳ್ಳಲಾಗಿದೆ. ವಸಾಹತುಶಾಹಿ ಕಾಲದ ನಿವೃತ್ತಿ ಅಧಿಕಾರಿಯ ಸಾಹಿತ್ಯ ಬರವಣಿಗೆ, ಅವರ ಅನುಭವಗಳು ಗುರುತಿಸುವ ಅಧ್ಯಯನ ಇದಾಗಿದೆ. ಆತ್ಮಕಥೆಗಳನ್ನು ಕುರಿತು ಬೇರೆ ಬೇರೆ ಲೇಖಕರು ಬರೆದಿರುವ ದೃಷ್ಟಿಕೋನಗಳು ಅಧ್ಯಯನಕ್ಕೆ ಬಹುಮುಖ್ಯವಾಗಿದೆ. ಲೇಖಕರ ವ್ಯಕ್ತಿತ್ವ, ರಾಷ್ಟ್ರೀಯವಾದದ ಮನೋಭಾವ ಮತ್ತು ಮೈಸೂರು ಭಾಗದ ಸಾಂಸ್ಕೃತಿಕ, ಆಡಳಿತ ಭಿನ್ನತೆಗಳನ್ನು ತಿಳಿಸಿ ಕೊಡುವ ಕೃತಿಗಳು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗುತ್ತದೆ.

೧. ನವರತ್ನ ರಾಮರಾವ್ - ಕೆಲವು ನೆನಪುಗಳು

೨. ನವರತ್ನ ರಾಮರಾವ್ - ಸಣ್ಣಕತೆಗಳು

೩. ನವರತ್ನ ರಾಮರಾವ್‌ರ ಆಕಾಶವಾಣಿಯಲ್ಲಿ ಪ್ರಸಾರಗೊಂಡ ಮೂರು ಲೇಖನಗಳು

## ಅಧ್ಯಯನದ ವಿಧಾನ

ಪ್ರಸ್ತುತ ಪ್ರಬಂಧದ ಅಧ.ಯನಕ್ಕೆ ಲೇಖಕ ಕೇಂದ್ರಿತ ವಿಧಾನವನ್ನು ಬಳಸಲಾಗಿದೆ. ಅಧ್ಯಯನಕ್ಕೆ ಆಯ್ದುಕೊಂಡ 'ನವರತ್ನ ರಾಮರಾವ್‌ಅವರ ಸಾಹಿತ್ಯಾಧ್ಯಯನ'ಎಂಬ ವಿಷಯದಲ್ಲಿ ಲೇಖಕರ ವೃತ್ತಿ ಜೀವನಕ್ಕೆ ಸಂಬಂಧಿಸಿದ ಅನುಭವಗಳನ್ನು, ಘಟನೆಗಳನ್ನು ತಿಳಿಸುವುದು, ವಸಾಹತುಶಾಹಿ ಕಾಲದಲ್ಲಿನ ಅನುಭವಗಳನ್ನು ಆಧುನಿಕತೆಯಲ್ಲಿ ನಿಂತುನೋಡುವ ಬಗೆ ಎಂತಹುದು ಎಂಬ ವಿಧಾನ ಮಾಡಲಾಗುತ್ತದೆ. ಮೈಸೂರಿನ ಸಂಸ್ಕೃತಿ, ಜನಜೀವನ ಬಗೆಗೆ ಲೇಖಕರ ದೃಷ್ಟಿಕೋನ ಹಾಗೂ ಅಭಿಪ್ರಾಯಗಳಲ್ಲಿರುವ ವ್ಯಾತ್ಯಾಸಗಳನ್ನು ಗುರುತಿಸಲಾಗುವುದು. ವಸಾಹತು ಹಿನ್ನೆಲೆಯಲ್ಲಿ ನೋಡುವ ಕ್ರಮ, ಅದರ ನಡುವಿನ ಭಿನ್ನತೆಗಳು, ವಿಶ್ಲೇಷಣೆಗಳ ಕುರಿತ ಚರ್ಚೆಯನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು.

ಈ ಅಧ್ಯಯನದಲ್ಲಿ ವಸಾಹತು ಕಾಲದ ಸಾಂಸ್ಕೃತಿಕ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಮೈಸೂರಿನ ಜನಜೀವನ, ಭಾಷೆ, ಆಚರಣೆಗಳು ಘಟನೆಗಳು, ಆಚರಣೆ, ಜೀವನ ವಿಧಾನ, ಗ್ರಾಮಗಳಲ್ಲಿನ

ವಾತಾವರಣ ಕುರಿತು ಲೇಖಕರ ಪ್ರತಿಕ್ರಿಯೆ ಏನು? ಎಂಬುದನ್ನು ಗುರುತಿಸಲಾಗುವುದು. ಲೇಖಕರು ಅಧಿಕಾರಿಶಾಹಿ ಮತ್ತು ಅಧಿಕಾರವರ್ಗಗಳ ಕುರಿತ ಭಿನ್ನತೆಗಳು, ಜೀವನಾನುಭವಕ್ಕೆ ಬಂದ ಹಲವಾರು ಸಾಮಾಜಿಕ ಚಿತ್ರಣಗಳು, ಚಾರಿತ್ರಿಕವಾದ ಘಟನೆಗಳು, ಆತ್ಮಕಥೆಯಲ್ಲಿ ಹೇಗೆ ವ್ಯಕ್ತವಾಗಿವೆ ಎಂಬುದು ಮುಖ್ಯವಾಗುತ್ತದೆ. ಮೈಸೂರು ಸರ್ಕಾರದ ಸಾಂಸ್ಕೃತಿಕ ನೋಟಗಳನ್ನು ಅವರ ಸಾಹಿತ್ಯದಲ್ಲಿ ಹೇಗೆ ವ್ಯಕ್ತಪಡಿಸಿದ್ದಾರೆ. ಮತ್ತು ಕನ್ನಡ ಸಾಹಿತ್ಯದಲ್ಲಿ ಬೇರೆ ಬೇರೆ ಲೇಖಕರ ಆತ್ಮಕಥೆಗಳ ದೃಷ್ಟಿಕೋನಗಳ ಅಭಿವ್ಯಕ್ತಿ ಕ್ರಮ ಹೇಗಿದೆ ಎಂಬುದನ್ನು ನೋಡುವುದು ಈ ಅಧ್ಯಯನದ ವಿಧಾನಕ್ಕೆ ಒಳಪಡಿಸಲಾಗಿದೆ.

ಈ ಅಧ್ಯಯನದಲ್ಲಿ ಆಯ್ದುಕೊಂಡಿರುವ ಆತ್ಮಕಥೆಗಳಲ್ಲಿನ ಆಶಯ ಮತ್ತು ಧೋರಣೆಗಳ ಬಗೆಗೆ ಸಹಜವಾಗಿ ಚರ್ಚಿಸಲಾಗಿದೆ. ಆತ್ಮಕಥೆಗಳ ಶೈಲಿ, ಭಾಷೆ, ಕಥನಾಕ್ರಮ ಆತ್ಮಕಥೆಯ ಹುಟ್ಟು, ಬೆಳವಣಿಗೆ ಕುರಿತು ಚರ್ಚಿಸಲಾಗುವುದು.

'ಕೆಲವು ನೆನಪುಗಳು' ಆತ್ಮಕಥೆಯು ವಸಾಹತುಶಾಹಿ ಹಿನ್ನೆಲೆಯಲ್ಲಿ ಬರೆದರಾದರೂ ಬ್ರಿಟೀಷ್ ನೀತಿಗಳನ್ನು ಪ್ರಬಲವಾಗಿ ವಿರೋಧಿಸುತ್ತಿದ್ದವರು, ಮೈಸೂರು ಸರ್ಕಾರದ ವಿಶಿಷ್ಟತೆಯಲ್ಲಿ ಕೃತಿಯಲ್ಲಿಬಿಂಬಿಸುತ್ತ ಹೋಗುತ್ತಾರೆ. ಬ್ರಿಟೀಷ್ ಮತ್ತು ಮೈಸೂರು ಸಂಸ್ಥಾನ ನಡುವಿನ ಆಡಳಿತದ ವ್ಯತ್ಯಾಸಗಳನ್ನು, ಪ್ರಾಂತೀಯ ಆಡಳಿತದ ವೈಶಿಷ್ಟ್ಯತೆಯನ್ನು ತೋರುವವಂತಿದೆ. ಒಟ್ಟಾರೆಯಾಗಿ ಮೈಸೂರಿನ ರಾಜಕೀಯ, ಆಡಳಿತ, ಸಾಮಾಜಿಕ, ಧಾರ್ಮಿಕ, ಕಲೆ, ಸಂಸ್ಕೃತಿ, ಜನಪದಗಳನ್ನು ಬಿಂಬಿಸುವ ಕೃತಿಯು ಭಿನ್ನವಾದ ಅಭಿವ್ಯಕ್ತತೆಯನ್ನು ಗುರುತಿಸಬೇಕಾಗಿದೆ.

ರಾಮರಾವ್ ಅವರ ವೃತ್ತಿಯೇ ಆ ಕಾಲದಲ್ಲಿ ಪ್ರತಿಷ್ಠಿತವಾಗಿತ್ತು. ಆಳುವ ಸರ್ಕಾರದ ಭಾಗವಾಗಿ ಅವರ ಅಧಿಕಾರಾವಧಿಯಲ್ಲಿ ನಡೆದಂತಹ ಕಾರ್ಯಗಳು, ವಿವಿಧ ಘಟನೆಗಳು, ಸಮಸ್ಯೆಗಳು, ಪರಿಹಾರಗಳು ಕುರಿತು ಆತ್ಮಕಥೆಯಲ್ಲಿ ಗ್ರಹಿಸುವುದಕ್ಕೆ ಪ್ರಯತ್ನಿಸಲಾಗುವುದು. ಲೇಖಕರ ಸಾಹಿತ್ಯಾಧ್ಯಯನ ಮತ್ತು ಅವುಗಳ ರಚನೆಯನ್ನು ತಾತ್ವಿಕ ಚರ್ಚೆಯ ಮೂಲಕ ಅಭಿವ್ಯಕ್ತಿ ವಿಧಾನವನ್ನು ಶೋಧಿಸಲಾಗುವುದು.

* * *

## ಅಧ್ಯಾಯ - ಎರಡು

# ಇದುವರೆಗಿನ ಅಧ್ಯಯನಗಳ ತಾತ್ವಿಕ ಸಮೀಕ್ಷೆ

ನವರತ್ನ ರಾಮರಾವ್ ಅವರು "ಕೆಲವು ನೆನಪುಗಳು" ಎಂಬ ಆತ್ಮಕಥೆವೊಂದರಿಂದಲೇ ಸಾಹಿತ್ಯದಲ್ಲಿ ಗುರುತಿಸಿಕೊಂಡವರು. ಮೂಲತಃ ಸಾಹಿತಿಗಳಲ್ಲದ ಇವರು ಆಗೀನ ಮೈಸೂರು ಸರ್ಕಾರದಲ್ಲಿ ಅನೇಕ ಉನ್ನತ ಹುದ್ದೆಗಳ ಅಧಿಕಾರಾವಧಿಯಲ್ಲಿ ನಡೆದಿರುವಂತಹ ಘಟನೆಗಳು ಮತ್ತು ಅವರ ಕಾರ್ಯವೈಖರಿಯ ಜೊತೆಗೆ ತಮ್ಮ ವ್ಯಕ್ತಿತ್ವವನ್ನು ಬಿಂಬಿಸಿಕೊಂಡಿದ್ದಾರೆ. ಇವರು ಬರೆದ ಸಣ್ಣ ಕಥೆ ಮತ್ತು ಆತ್ಮಕಥೆಯಿಂದ ಸಾಹಿತ್ಯದಲ್ಲಿ ಹೊಸತನದಿಂದ ಕೂಡಿದ ಉತ್ತಮ ಕೃತಿಯಾಗಿಸಿ ಚಿರಸ್ಮರಣೀಯರಾಗಿದ್ದಾರೆ. ಆತ್ಮಕಥೆಯ ಕುರಿತು ತ.ಸು.ಶಾ, ಮಾಸ್ತಿ, ಡಿ.ವಿ.ಜಿ, ತಿ.ತಾ.ಶರ್ಮ ಮತ್ತು ಇತ್ತೀಚಿನ ಲೇಖಕರು ರಾಯರ ಸಾಹಿತ್ಯ ರಚನೆಗಳನ್ನು ಕುರಿತ ಮೆಚ್ಚಿ ಬರೆದಿದ್ದಾರೆ. ಮೂಲತಃ ಸಾಹಿತಗಳಲ್ಲದ ಅವರ ಸಾಹಿತ್ಯವನ್ನು ಕುರಿತು ವಿಮರ್ಶಾ ಲೇಖನಗಳು ಬಂದಿರುವುದು ಕಡಿಮೆ ಎನಿಸುತ್ತದೆ. ಕನ್ನಡದಲ್ಲಿ ಹಲವು ಉತ್ತಮ ಪುಸ್ತಕಗಳು ವಿಮರ್ಶಕರ ಕಣ್ಣಿಗೆ ಕಾಣದೆ ಅದರ ಮೌಲ್ಯವನ್ನು ಮರೆಯಾಗಿಸಿದಂತಿದೆ. ಇಂತಹ ಸಾಲಿನಲ್ಲಿ ನವರತ್ನ ರಾಯರು ಸಹ ಒಬ್ಬರಾಗಿ ನಿಲ್ಲುತ್ತಾರೆ.

ಅಧ್ಯಯನದ ದೃಷ್ಟಿಕೋನದಿಂದ ವಿಮರ್ಶಾ ಲೇಖನಗಳ ಸಮೀಕ್ಷೆಯನ್ನು ೧. ಸ್ವವಿವರ, ೨. ಬರವಣಿಗೆ, ೩. ಅಧಿಕಾರಾವಧಿಯ ದಕ್ಷತೆ, ೪. ವ್ಯಕ್ತಿತ್ವ ಮತ್ತು ಪ್ರಾಮಾಣಿಕತೆ ಎಂಬ ನಾಲ್ಕು ಭಾಗಗಳಾಗಿ ಮಾಡಿಕೊಳ್ಳಲಾಗಿದೆ.

### ೧. ಸ್ವವಿವರ

ನವರತ್ನ ರಾಮರಾಯರು ೧೮೭೭ ಮೇ ೨೭ರಲ್ಲಿ ಬೆಂಗಳೂರಿನಲ್ಲಿ ಜನಿಸಿದರು. ಮಹಾರಾಷ್ಟ್ರ ದೇಶಸ್ಥ ಬ್ರಾಹ್ಮಣರಾದ ರಾಯರದು ಮೂಲತಃ ವೈದಿಕ ಪರಂಪರೆಯುಳ್ಳವರು. ಇವರ ಹಿರಿಯರು ಗುರುಮಠದ ಪೀಠಸ್ಥರಾಗಿದ್ದಾರೆ, ಮಹಾವಿದ್ವಾಂಸರೆಂದು ಹೆಸರಾದ ಅವರ ಮನೆತನದಲ್ಲಿ ಒಂಬತ್ತು ಜನ

ವಿದ್ವಾಂಸರಿದ್ದರೆಂಬ ಕಾರಣಕ್ಕಾಗಿ 'ನವರತ್ನ' ರೆಂದೇ ಕರೆಯುತ್ತಿದ್ದರು. ರಾಯರ ಪ್ರಾಥಮಿಕ ಶಿಕ್ಷಣ ಮತ್ತು ನಂತರ ಶಿಕ್ಷಣದ ಕುರಿತ ವಿವರಗಳನ್ನು ದಾಖಲಿಸಿಕೊಂಡಿಲ್ಲ ಎಂಬ ವಿವರವನ್ನು ವಿಮರ್ಶಾ ಲೇಖನಗಳಲ್ಲಿ ವಿವಿಧ ಲೇಖಕರ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಸ್ವತಃ ರಾಯರು ಪ್ರಾಥಮಿಕ ಶಿಕ್ಷಣವನ್ನು ಎಲ್ಲೂ ದಾಖಲಿಸಿಕೊಂಡಿಲ್ಲವಾದರೂ, ಕಾಲೇಜ್ ಶಿಕ್ಷಣವನ್ನು ನ್ಯಾಷನಲ್ ಕಾಲೇಜಿನಲ್ಲಿ ನಡೆಸಿದ್ದರೆಂದು ತಿಳಿಸಿದ್ದಾರೆ. ತಾರುಣ್ಯದ ದಿನಗಳ ಬಗ್ಗೆ ಹೆಚ್ಚಾಗಿ ಹೇಳಿಕೊಂಡಿಲ್ಲ, ವಿದ್ವಾಂಸರಾದ ಟೇಟ್ ಸಾಹೇಬರು, ರಾಜಾಜಿಯವರೊಂದಿಗಿನ ಸ್ನೇಹ ಮತ್ತು ಇಂಗ್ಲೀಷ್ ಭಾಷೆಯ ಮೇಲಿನ ವ್ಯಾಮೋಹವನ್ನು ರಾಯರು ದಾಖಲಿಸಿಕೊಂಡಿದ್ದಾರೆ.

ರಾಮರಾಯರ ಹುಟ್ಟು, ಬೆಳವಣಿಗೆಯನ್ನು ಮಾಸ್ತಿ, ತಿ.ತಾ.ಶರ್ಮ, ತ.ಸು.ಶಾ, ಶರಣಮ್ಮ ಗೋರೇಬಾಳ, ನವರತ್ನ ಲಕ್ಷ್ಮಣ, ಮುಂತಾದ ಮಾಹಿತಿಗಳಿಂದ ತಿಳಿದು ಬರುತ್ತದೆ. ಎಲ್ಲಾರ ಅಭಿಪ್ರಾಯಗಳು 'ಕೆಲವು ನೆನಪುಗಳು' ಪುಸ್ತಕ ಮತ್ತು ಮಾಸ್ತಿಯವರ ನವರತ್ನ ರಾಮರಾಯ ಪುಸ್ತಕದಿಂದ ಹೊರತಾದ ಮಾಹಿತಿಗಳಾಗಿ ಕಂಡು ಬರುವುದಿಲ್ಲ. ರಾಯರ ಬಗ್ಗೆ ಒಡನಾಡಿಯಾಗಿದ್ದ ಮಾಸ್ತಿಯವರೇ ಸ್ಪಷ್ಟವಾಗಿ ವಿವರಗಳನ್ನು ನೀಡಲು ಸಾಧ್ಯವಾಗಿಲ್ಲ. ಇಂತಹ ಕಾರಣಗಳಿಂದಲೇ ಅವರ ಸ್ವವಿವರಗಳ ಬಗ್ಗೆ ಕಡಿಮೆ ದಾಖಲೆಗಳನ್ನು ನೀಡಿರುವುದು ಸ್ಪಷ್ಟವಾಗುತ್ತದೆ.

ರಾಮರಾವ್‌ರ ಆಪ್ತರಾದ ಮಾಸ್ತಿವೆಂಕಟೇಶ್ ಅಯ್ಯಂಗಾರ್‌ರವರು ಸ್ವವಿವರಗಳನ್ನು ಈ ರೀತಿಯಾಗಿ ಹೇಳಿದ್ದಾರೆ. ರಾಯರು ೧೮೭೭ ಮೇ ೨೭ರಂದು ಮೈಸೂರಿನಲ್ಲಿ ಜನಿಸಿದ್ದಾರೆ. ತಂದೆ ಬಾಲಕೃಷ್ಣರಾಯರು ರಾಯರದು ವೈಧಿಕರಿಂದ ಮನೆತನದವರೆಂದು ತಿಳಿಸಿದ್ದಾರೆ. ರಾಯರು ಚಿಕ್ಕ ವಯಸ್ಸಿನಲ್ಲಿ ತಾಯಿಯನ್ನು ಕಳೆದುಕೊಂಡು ಸೋದರ ಮಾವಂದಿರಲ್ಲಿ ಪ್ರಾಥಮಿಕ ಶಿಕ್ಷಣ ಮುಗಿಸಿದರು. ಚಿಕ್ಕಂದಿನಿಂದಲೇ ಬುದ್ಧಿವಂತರು, ಆಟ, ಮಾತುಗಾರಿಕೆ, ಎದೆಗಾರಿಕೆ, ಎಲ್ಲಾದರಲ್ಲೂ ನಿಪುಣರಾಗಿದ್ದವರು. ಇವರನ್ನು ತುಂಟ, ಘಟ್ಟಿಗ ಎಂದು ಕರೆಯುತ್ತಿದ್ದರು.

ಮಾಸ್ತಿಯವರು ಪ್ರಾಥಮಿಕ ಶಿಕ್ಷಣವನ್ನು ಕುರಿತು ಸ್ಪಷ್ಟವಾದ ದಾಖಲೆ ನೀಡಿಲ್ಲ. "ಹೈಸ್ಕೂಲ್ ಹಂತವನ್ನು ಸೆಂಟ್ರಲ್ ಕಾಲೇಜ್‌ನಲ್ಲಿ ಓದಿ ಅಲ್ಲಿಯೂ ದುಷ್ಟ ನೆನಿಸಿಕೊಂಡಿದ್ದಾರೆ. ಕಾನೂನು ಪದವಿಗಾಗಿ ಮುಂಬೈಗೆ ತೆರಳಿದ್ದರು. ಕಾಲೇಜ್ ದಿನಗಳಲ್ಲಿ ಮಾವನ ಮಗಳಾದ ಕೌಶಜಬಾಯಿಯನ್ನು ಮದುವೆಯಾಗಿದ್ದರು. ವಿದ್ಯಾಭ್ಯಾಸದ ನಂತರ ಮೈಸೂರಿನಲ್ಲಿ ಸ್ವಲ್ಪ ಕಾಲ ವಕೀಲರಾಗಿ ಕಾರ್ಯ ನಿರ್ವಹಿಸಿ ಅನಂತರ ಅಮಲ್ದಾರರಾಗಿ ಸೇವೆ ಸಲ್ಲಿದ್ದರು" ಎಂದು ರಾಮರಾವ್‌ರ ಸ್ವವಿರದ ಬಗ್ಗೆ ಹಲವು ವಿಚಾರಗಳನ್ನು ಸ್ವತಃ ಅವರೇ ಹೇಳಿಕೊಂಡಿದ್ದಾರೆ.

ಕನ್ನಡ ವಿಷಯ ವಿಶ್ವಕೋಶ ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯದ ಗ್ರಂಥದಲ್ಲಿ ರಾಮರಾವ್‌ರು ೧೮೭೭-೧೯೬೦ ಇವರು ಬದುಕಿದ್ದ ಕಾಲಮಾನವೆಂದು ತಿಳಿಸಿದ್ದಾರೆ. ಅವರು ಬೆಂಗಳೂರು ಜಿಲ್ಲೆಯ ದೇವನ ಹಳ್ಳಿಯಲ್ಲಿ ಜನಿಸಿದರು. ನವರತ್ನ ಎಂಬುದು ಮನೆತನದ ಹೆಸರಾಗಿತ್ತು. ಮೈಸೂರು ಸಿವಿಲ್

ಪರೀಕ್ಷೆಯಲ್ಲಿ ಮೊದಲ ದರ್ಜೆಯಲ್ಲಿ ತೇರ್ಗಡೆಯಾಗಿ ಮೈಸೂರು ಸರ್ಕಾರದಲ್ಲಿ ಪ್ರೊಬೇಷನರಿಯಾಗಿ ಅಮಲ್ದಾರರಾಗಿ ಕೆಲಸಕ್ಕೆ ಸೇರಿದರು. ಹಲವು ಹುದ್ದೆಗಳನ್ನು ನಿರ್ವಹಿಸಿದ ರಾಮರಾವ್‌ರು ೧೯೩೪ರಲ್ಲಿ ನಿವೃತ್ತರಾದರು[೫] ಎಂಬ ಮಾಹಿತಿ ದಾಖಲಿಸಿದ್ದಾರೆ.

ನವರತ್ನ ರಾಜಾರಾಮ್‌ರು ಕರ್ಮವೀರ ಪತ್ರಿಕೆಯಲ್ಲಿ 'ನವರತ್ನ ರಾಮರಾವ್ ಒಂದು ನೆನಪು' ಎಂಬ ಲೇಖನದಲ್ಲಿ ರಾಮರಾವ್‌ರನ್ನು ಕುರಿತು ಸ್ವವಿವರವನ್ನು ಈ ರೀತಿಯಾಗಿ ತಿಳಿಸಿದ್ದಾರೆ. ರಾಯರು ಹುಟ್ಟಿದ ದಿವಸ ೨೭ ಮೇ ೧೮೭೭ರಲ್ಲಿ ಜನಸಿದರು. ೧೯೬೦ರಲ್ಲಿ ಸ್ವರ್ಗಸ್ಥರಾದರು. ಅವರ ಮೊಮ್ಮಗನಾದ ರಾಜಾರಾಮರಿಗೆ ಕೊನೆಯವರೆಗೂ ನಿಕಟ ಸಂಬಂಧವಿತ್ತು ಎಂದು ತಿಳಿಸಿದ್ದಾರೆ. ರಾಯರು ಕನ್ನಡ, ಇಂಗ್ಲೀಷ್, ಸಂಸ್ಕೃತ ಮತ್ತು ಫ್ರೆಂಚ್ ಭಾಷೆಗಳಲ್ಲಿ ಸಾಹಿತ್ಯದ ಜ್ಞಾನವಿತ್ತು. ಇದಲ್ಲದೆ ಪಿಟೀಲನ್ನು ನುಡಿಸುತ್ತಿದ್ದರು. ಸಂಗೀತ ಜ್ಞಾನವೂ ಅಪಾರವಾಗಿದ್ದರಿಂದ, ಕರ್ನಾಟಕ ಸಂಗೀತದಲ್ಲಿ ರಾಮರಾವ್‌ರು ಆಸಕ್ತಿ ಹೊಂದಿದ್ದರು[೬] ಎಂಬುದಾಗಿ ತಿಳಿಸಿದ್ದಾರೆ.

## ೨. ವ್ಯಕ್ತಿತ್ವ

ತಿ.ತ.ಶರ್ಮರು `ಕೆಲವು ನೆನಪುಗಳು` ಕೃತಿಯ ಮೆಚ್ಚುನುಡಿಯಲ್ಲಿ ರಾಮರಾವ್‌ರವರ ವ್ಯಕ್ತಿತ್ವ ಕುರಿತು ವಿಮರ್ಶಿದ್ದಾರೆ. ರಾಮರಾವ್‌ರು ಉತ್ತಮ ಕಲಾವಿಮರ್ಶಕರು, ಶುದ್ಧ ಸ್ವರದಂತೆ ಶುದ್ಧ ಹೃದಯವು, ಯಾರ ಮೇಲೆ ತಾನೇ ಪ್ರಭುತ್ವ ಮಾಡಲಾರದು? ರಾಯರದು ಸಂಸ್ಕಾರಗೊಂಡ ಅಭಿರುಚಿ, ಸಂಯಮಗೊಂಡ ಭಾವ, ಔಚಿತ್ಯಾರ್ಜಿವದ ವಿಮರ್ಶಕ ಶಕ್ತಿ ಮತ್ತು ವೃತ್ತಿ ಕುಶಲರು, ಕರ್ಮಕೌಶಲವನ್ನು ಮೀರಿದ ಉದಾರ ಮತ್ತು ಸಹಾನುಭೂತಿ ಹೃದಯದವರು[೭] ಎಂದಿದ್ದಾರೆ.

ವಿಮರ್ಶಕರ ಈ ಹೇಳಿಕೆಗಳನ್ನು ನಂಬುವುದು ಕಷ್ಟವೆನಿಸುತ್ತದೆ. ಲೇಖಕರ ವ್ಯಕ್ತಿತ್ವ ಒಂದು ಕೃತಿಯಲ್ಲಿ ತಿಳಿಯುವುದು ಸಾಧ್ಯವಿಲ್ಲ. ರಾಮರಾವ್‌ರ ಮಟ್ಟಿಗೆ ಕೃತಿಯಿಂದಲೇ ವ್ಯಕ್ತಿತ್ವದ ಬಗ್ಗೆ ಸಾಬೀತಾದರೂ ಅವರ ಕೌಟುಂಬಿಕ ಜೀವನವೂ ಬರೆದುಕೊಂಡಿಲ್ಲ. ಕೃತಿಯ ಮೂಲಕ ಗಮನಿಸಿದಾಗ ಅವರ ವ್ಯಕ್ತಿತ್ವಕ್ಕೂ, ವೈಯಕ್ತಿಕ ಜೀವನಕ್ಕೂ ಭಿನ್ನವಾಗಿಯೂ ಕಂಡುಬರುತ್ತಾರೆ. ರಾಮರಾವ್‌ರಲ್ಲಿ ಉದಾರತೆ, ಸಹಾನುಭೂತಿ ಹೃದಯದ ಸಹಜ ವ್ಯಕ್ತಿತ್ವದವರೆಂದು ಒಪ್ಪಬಹುದಾಗಿದೆ.

ರಾಮರಾವ್ ಅವರು ಮೈಸೂರು ಸರ್ಕಾರದಲ್ಲಿ ಅನೇಕ ಉನ್ನತ ಹುದ್ದೆಗಳನ್ನು ನಿರ್ವಹಿಸಿದ ಅತ್ಯಂತ ದಕ್ಷ ಮತ್ತು ಪ್ರತಿಭಾವಂತ ಅಧಿಕಾರಿಗಳಲ್ಲಿ ಒಬ್ಬರಾಗಿದ್ದಾರೆ. ಅವರ ಕರ್ತವ್ಯ ನಿಷ್ಠೆ, ದಕ್ಷತೆಗಳನ್ನು ಮೆಚ್ಚಿದ ಜಯಚಾಮರಾಜೇಂದ್ರ ಒಡೆಯರ್ ೧೯೪೩ರಲ್ಲಿ 'ರಾಜಸೇವಾ ಪ್ರಸಕ್ತ' ಎನ್ನುವ ಬಿರುದನ್ನು ನೀಡಿ ಗೌರವಿಸಿದ್ದರು.

ರಾಮರಾವ್ ಅವರ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿ ಬರೆದ ನೆನಪುಗಳು ಕುರಿತು ತಿ.ತಾ.ಶರ್ಮರು ಈ ರೀತಿ ಹೇಳುತ್ತಾರೆ. `ನೆನಪು ಮಾನವನ ಮಹತ್ತನ್ನು ಅವನ ಸಹಜತೆಯನ್ನು ಅಳೆಯುವ ಅಪೂರ್ವ

ಮಾನದಂಡ, ದೇವರು ಮನುಷ್ಯನಿಗೆ ಕೊಟ್ಟಿರುವ ವರಗಳಲ್ಲಿ ನೆನಪು ಪರಮೋತ್ತಮವಾದುದು. ಸ್ಮರಣೆ ಶಕ್ತಿ ಉಳ್ಳವನೇ ಪುಣ್ಯವಂತ... ನೆನಪು ಪ್ರೀತಿಯ ಪ್ರೇಮದ ಮತ್ತೊಂದು ಹೆಸರೆಂದು ಹೇಳಿದರೂ ಒಪ್ಪುತ್ತದೆ. ಪರವಶತೆ, ಪವಿತ್ರತೆಯೊಂದಿಗೆ ಸಾಯುಜ್ಯ"[1] ಎಂದು ಹೇಳುತ್ತಾರೆ.

ತಿ.ತಾ.ಶರ್ಮರ ಈ ಹೇಳಿಕೆಯು ಲೇಖಕರ ನೆನಪುಗಳೂ ಅವರ ಬದುಕಿನ ಘಟನೆಗಳನ್ನು ತೆರೆದು ತೋರಿಸುತ್ತವೆ. ನೆನಪುಗಳು ವ್ಯಕ್ತಿಯ ವ್ಯಕ್ತಿತ್ವವನ್ನು ಮನೋಧರ್ಮವನ್ನು ಕನ್ನಡಿಯಂತೆ ಪ್ರತಿಬಿಂಬಿಸುತ್ತದೆ. ನವರತ್ನ ರಾಮರಾವ್ ಅವರ ವ್ಯಕ್ತಿತ್ವವು ನೆನಪುಗಳ ದಾಖಲೆಯಿಂದಾಗಿ ಸ್ಪಷ್ಟವಾಗಿ ಬಿಂಬಿಸುತ್ತದೆ. ಕೆಲವು ನೆನಪುಗಳು ಮತ್ತು ಸಣ್ಣಕತೆಗಳಲ್ಲಿ ಇವರ ವ್ಯಕ್ತಿತ್ವದ ನೈಜ ಚಿತ್ರಣವನ್ನೇ ಕಟ್ಟಿಕೊಟ್ಟಿದ್ದಾರೆ.

ತ.ಸು.ಶಾಮರಾಯರು ರಾಮರಾಯರ ವ್ಯಕ್ತಿತ್ವವನ್ನು ಕೃತಿಯ ವಿಮರ್ಶೆಯಲ್ಲಿ ಈ ರೀತಿಯಾಗಿ ಬಿಂಬಿಸಿದ್ದಾರೆ. "ರಾಮರಾಯರು ಸುಸಂಸ್ಕೃತ ಬ್ರಾಹ್ಮಣ ಮನೆತನದವರು, ಆದರೆ ಅವರ ಮನೆತನದ ಚರಿತ್ರೆಯನ್ನೇನೂ ಬರೆದುಕೊಳ್ಳಲು ಹೋದವರಲ್ಲ, ತಮ್ಮ ಕತೆಗಿಂತಲೂ ಇತರರ ಕತೆಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ, ಎಂಬುದರಲ್ಲೇ ಈ ಕೃತಿಯ ಸ್ವಾರಸ್ಯ ಅಡಗಿರುವುದು"[2] ಎಂದಿದ್ದಾರೆ.

ರಾಮರಾವ್‌ರವರ ವ್ಯಕ್ತಿತ್ವವನ್ನು ವಿಮರ್ಶಿಸಿರುವ ತ.ಸು.ಶಾಮರಾಯರ ಮಾತುಗಳು ಮೆಚ್ಚುವಂತವುಗಳಾಗಿವೆ. ವಿಮರ್ಶಕರಾಗಿ ಒಂದು ಕೃತಿಯನ್ನು ಗ್ರಹಿಸುವ ಕೌಶಲವನ್ನು ಇಲ್ಲಿ ಕಾಣಬಹುದಾಗಿದೆ. ಕೃತಿಯನ್ನು ಸಮಗ್ರವಾಗಿ ಅಧ್ಯಯನ ಮಾಡಲು ಲೇಖಕರ ವ್ಯಕ್ತಿತ್ವವೂ ಸಹಾಯಕವಾಗುತ್ತದೆ. ರಾಮರಾವ್ ರವರ ಕೃತಿಯಲ್ಲಿ ಬೇರೊಂದು ಪಾತ್ರಗಳನ್ನು ವಿಶೇಷವಾಗಿ ಬಿಂಬಿಸಿರುವುದರಿಂದಲೇ ಈ ಕೃತಿಯ ಸ್ವಾರಸ್ಯ ಅಡಗಿರುವ ಮಾತು ಸತ್ಯವಾಗಿದೆ.

ತ.ಸು.ಶಾಮರಾಯರು "ಸಾಹಿತ್ಯ ಚರಿತ್ರೆಯಲ್ಲಿ ಒಂದೇ ಒಂದು ಕೃತಿಯ ಮೂಲಕ ಅಮರರಾಗಿ ಉಳಿದಿರುವ ನವರತ್ನ ರಾಮರಾವ್‌ರನ್ನು ಯಾವ ಗುಂಪಿಗೆ ಸೇರಿಸಬೇಕು? ಅಧಿಕಾರ ಕ್ಷೇತ್ರಕ್ಕೆ ಸೀಮಿತವಾಗಿದ್ದ ಮಾಮೂಲಿ ಕಾಗದ ಪತ್ರಗಳ ಬರವಣಿಗೆ ಗ್ರಂಥವೊಂದನ್ನು ರಚಿಸಲು ಸಾಮರ್ಥವಾಗಬಲ್ಲದೆ ಎಂಬುದು ಇಲ್ಲಿನ ಪ್ರಶ್ನೆ ಅದು ರಾಮರಾವ್‌ರ ಮಟ್ಟಿಗೆ ನಿಜವಾಗಿದ್ದು. ಸೋಜಿಗದ ಸಂಗತಿಯಾಗಿದೆ. ಆತ್ಮವಿಶ್ವಾಸದಿಂದ ಮತ್ತು ಅನನ್ಯ ಶ್ರದ್ಧೆಯಿಂದ ತನ್ನ ತಾಯ್ನುಡಿಯನ್ನು ಪೂಜಿಸುವವನ ಪಾಲಿಗೆ ಆ ಸರಸ್ವತಿಯ ವರಪ್ರಸಾದವೇ ಇದ್ದೇ ಇರುತ್ತದೆ ಎಂಬುದಕ್ಕೆ ರಾಮರಾವ್‌ರ ಕೃತಿಯ ಗದ್ಯದ ಬೇಡಗೇ ಸಾಕ್ಷಿಯಾಗಿದೆ"[3] ಎಂದಿದ್ದಾರೆ.

ರಾಮರಾವ್‌ರಲ್ಲಿದ್ದ ವಿದ್ವತ್ತು, ಪಾಂಡಿತ್ಯವು ಅವರ ಅಧಿಕಾರಯುತ ಅನುಭವಗಳನ್ನು ವಿಶಿಷ್ಟವಾಗಿ ಕಟ್ಟಿಕೊಟ್ಟು, ಸಾಹಿತ್ಯ ವಲಯಕ್ಕೆ ಸೋಜಿಗವೆಂಬಂತಾದರೂ, ಅವರ ಕೃತಿಯನ್ನು ಓದಿದಾಗ ರಾಮರಾವ್‌ರವರ ವ್ಯಕ್ತಿತ್ವ ಅರಿಯಲು ಸಾಧ್ಯವಾಗುತ್ತದೆ. ಅಂಥಹ ವ್ಯಕ್ತಿತ್ವದ ನಿದರ್ಶನದಿಂದಲೇ ಚಿರಕಾಲ ನೆನಪಿನಲ್ಲಿರುತ್ತಾರೆ.

ಮಾಸ್ತಿಯವರ ಪುಸ್ತಕದಲ್ಲಿ ರಾಜಾಜಿಯವರು ತಮ್ಮ ಸ್ನೇಹಿತನ ವ್ಯಕ್ತಿತ್ವವನ್ನು ಈ ರೀತಿ ತಿಳಿಸಿದ್ದಾರೆ. ಅನೇಕ ಗ್ರಂಥಗಳನ್ನು ಜೊತೆಯಾಗಿ ಓದಿದೆವು. ನಮ್ಮಿಬ್ಬರಲ್ಲಿ ಅವರ ಸಾಹಿತ್ಯ ಜ್ಞಾನ

ಹೆಚ್ಚು ಸೂಕ್ಷ್ಮ, ಅಭಿರುಚಿ ಉತ್ಕೃಷ್ಟ ರೀತಿಯದು. ಒಬ್ಬ ಮಾಂತ್ರಿಕ ಹೇಗೆ ನಡೆಸಬಹುದೊ ಆಗೆಯೇ ನಡೆಸುತ್ತಿದ್ದರು. ಹಾಸ್ಯವನ್ನು ಸವಿಯುತ್ತಿದ್ದೆವು, ತತ್ವಶಾಸ್ತ್ರಗಳನ್ನು ಚರ್ಚಿಸುತ್ತಿದ್ದೆವು"[೮] ಎಂದಿದ್ದಾರೆ.

ರಾಜಾಜಿಯವರ ಜೊತೆಗಿನ ಸ್ನೇಹ ಅವರ ಕ್ರಿಯಾಶೀಲ ವ್ಯಕ್ತಿತ್ವವನ್ನು ತೋರಿಸಿದ್ದಾರೆ. ಈ ಅಭಿಪ್ರಾಯವು 'ಕೆಲವು ನೆನಪುಗಳು' ಪುಸ್ತಕದಿಂದಲೇ ಸ್ಪಷ್ಟವಾಗುತ್ತದೆ. ರಾಜಾಜಿಯವರು ರಾಮರಾವ್‌ರ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿರುವ ವಾಕ್ಯಗಳು ವಿಶೇಷವೆನಿಸುತ್ತದೆ.

ತಿ.ತಾ.ಶರ್ಮರ ಮೆಚ್ಚುನುಡಿಯಲ್ಲಿ 'ಕೆಲವು ನೆನಪುಗಳು' ಕೃತಿಯ ವಿಮರ್ಶೆಯಲ್ಲಿ ರಾಮರಾವ್‌ರ ವ್ಯಕ್ತಿತ್ವದ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸಿದ್ದು ಹೀಗೆ "ಕೃತಿಯ ಓದಿನಿಂದ ಎಲ್ಲಾ ವಯಸ್ಸಿನವರೂ ಎಲ್ಲಾ ಮಟ್ಟದ ಸಂಸ್ಕಾರ ಪಡೆದವರೂ, ಸುಖ ಸ್ಪರ್ಶಾನುಭವ ಪಡೆಯಲು ಯೋಗ್ಯವಾದ ಮೂಲಭೂತ ಪ್ರಕೃತಿಗಳೇ ನೆನಪುಗಳಾಗಿವೆ. ಕೃತಜ್ಞತೆ ಇಲ್ಲದ ಈ ಸಹಜ ಈ ಗುಣ, ಈ ಸೌಂದರ್ಯ, ಈ ಓಜಸ್ಸು, ಈ ಪ್ರತಿಭೆ ಯಾವ ಹೆಸರಿಟ್ಟಾದರೂ ಕರೆಯಿರಿ, ಇದಕ್ಕೆಲ್ಲಾ ಮೂಲ ರಾಯರು ಅವರ ಸಂಸ್ಕಾರ, ಅವರ ಮನೋಧರ್ಮ, ಅವರ ಜೀವನ ವಿಧಾನ, ಅವರ ಗುರಿ"[೯] ಎಂದಿದ್ದಾರೆ.

ತಿ.ತಾ.ಶರ್ಮರ ಅಭಿಪ್ರಾಯಗಳು ಒಂದೊಂದು ಪದಗಳು ರಾಮರಾವ್‌ರ ವ್ಯಕ್ತಿತ್ವದ ಮಟ್ಟಿಗೆ ಸತ್ಯವಾಗಿವೆ. ಕಿರಿಯರಿಂದ ಹಿರಿಯರವರೆಗೂ ಸಂಸ್ಕಾರವನ್ನು ಪಡೆಯುವಂತಹ ವಿಶಿಷ್ಟ ಗುಣವೂ ರಾಮರಾವ್‌ರಲ್ಲಿ ಅಡಗಿದೆ. ಅವರಲ್ಲಿನ ವ್ಯಕ್ತಿತ್ವ ಒಂದೇ ರೀತಿಯ ಸಹಜತೆಯನ್ನು ತೋರಿದಂತಿಲ್ಲ. ಕೃತಿಯ ಪ್ರಾರಂಭದಲ್ಲಿ ನಿಷ್ಠುರತೆ, ದರ್ಪತನದ ವ್ಯಕ್ತಿತ್ವ ಕಂಡುಬಂದರೂ ಆನಂತರದಲ್ಲಿ ರಾಮರಾವ್‌ರಲ್ಲಿ ವಿಶೇಷವಾದ ಗುಣಗಳನ್ನು ಒಂದೊಂದಾಗಿ ಗುರುತಿಸಬಹುದಾಗಿದೆ. ಹೀಗಾಗಿ ಅವರ ವ್ಯಕ್ತಿತ್ವವು ವಿಶೇಷವಾಗಿ ನಿಲ್ಲುತ್ತದೆ.

ರಾಮರಾವ್‌ರ ಮಟ್ಟಿಗೆ ಸೌಂದರ್ಯ ಓಜಸ್ಸು, ಪತ್ರಿಭೆ, ಮನೋಧರ್ಮ, ಗುರಿಗಳು, ಗುಣಗಳು, ವ್ಯಕ್ತಿತ್ವದ ನಿದರ್ಶನಗಳಾಗಿವೆ. ಅವರ ಇಡೀ ಕೃತಿಯಲ್ಲಿ ಅನುಭವಗಳ ಪರಿಚಯದ ಜೊತೆಗೆ, ವ್ಯಕ್ತಿತ್ವದ ಗುಣಗಳು ಒಂದೊಂದಾಗಿ ಅನಾವರಣ ಗೊಳಿಸಿದಂತಿದೆ. ತಿ.ತಾ.ಶರ್ಮರು ರಾಮರಾವ್‌ರ ವ್ಯಕ್ತಿತ್ವದ ಬಗೆಗಿನ ಅಭಿಪ್ರಾಯಗಳು ಸಮಂಜಸವೆನಿಸುತ್ತವೆ. ಅವರ ವಿಶಿಷ್ಟವಾದ ಗುಣಗಳಿಂದಲೇ ಬಹುಮುಖಿ ಅಧ್ಯಯನ ಮಾಡಲು ಸಾಧ್ಯವಾಗಿದೆ.

ತ.ಸು.ಶಾಮರಾಯರು 'ಸ್ವಸ್ತಿ' ಕೃತಿಯಲ್ಲಿ 'ಕೆಲವು ನೆನಪುಗಳು' ಕುರಿತ ವಿಮರ್ಶಾ ಲೇಖನದಲ್ಲಿ ರಾಮರಾವ್‌ರ ವ್ಯಕ್ತಿತ್ವದ ಬಗ್ಗೆ ಈ ರೀತಿಯಾಗಿ ತಿಳಿಸಿದ್ದಾರೆ. "ಈ ಕೃತಿಯನ್ನು ಓದಿ ಮುಗಿಸುವ ವೇಳೆಗೆ 'ಭಲೆ'! ಚಾಣಾಕ್ಷ ಅಧಿಕಾರಿ ಎಂದರೆ ಇವರು, ನಮ್ಮ ಎಲ್ಲ ಅಧಿಕಾರಿಗಳೂ ರಾಮರಾಯರ ಕಲಿಯಬಹುದಾದ ಪಾಠ ಎಷ್ಟಿದೆ. ಇಂಥ ವಿವೇಚನಪರರೂ ದೇಶ ವತ್ಸಲರೂ, ಪ್ರಾಮಾಣಿಕರು ಆದ ಅಧಿಕಾರಿಗಳು ನಮ್ಮ ದೇಶದಲ್ಲೆಲ್ಲಾ ತುಂಬಿರಬಾರದೇ! ಎಂದು ನಿಟ್ಟುಸಿರನ್ನು ನಾವು ಬಿಡುತ್ತೇವೆ. ಅಷ್ಟರ ಮಟ್ಟಿಗೆ ಈ ಪುಟ್ಟ ಮಹಾಭಾರತದಿಂದ ಎದ್ದು ನಮ್ಮ ಕಣ್ಣೆದುರಿಗೆ ರಾಯರ ಮೂರ್ತಿ ಗೋಚರಿಸುತ್ತದೆ"[೧೦] ಎಂದಿದ್ದಾರೆ.

ತ.ಸು.ಶಾಮರಾಯರು ರಾಮರಾವ್‌ರವರ ವ್ಯಕ್ತಿತ್ವ ಕುರಿತಾದ ಹೇಳಿಕೆಗಳು ಕೃತಿಯ ಪುಟಪುಟಗಳಲ್ಲಿ ಅವರ ಭಿನ್ನ ವ್ಯಕ್ತಿತ್ವದ ಪರಿಚಯವನ್ನು ಅರಿಯಬಹುದಾಗಿದೆ. ನೆನಪುಗಳು ಮರೆಯಾಗುವ ಸಂದರ್ಭದಲ್ಲಿ ಈ ವಿವೇಚನೆ ನೆನಪಿಸದೇ ಇರುವುದಿಲ್ಲ. ಅವರ ಒಂದೊಂದು ಅನುಭವವು ಕುತೂಹಲವೇ, ಹಾಗಾಗಿಯೇ ಇವರ ಜೀವನ ವಿಧಾನವನ್ನು ಪುಟ್ಟ ಮಹಾಭಾರತವೆಂದೆ ಅಭಿಪ್ರಾಯಪಟ್ಟಿದ್ದು ಸಮಂಜಸವಾಗಿದೆ. ಕೃತಿಯ ಪ್ರತಿ ಸಂದರ್ಭವು ಒಂದೊಂದು ರೀತಿಯ ಮೆಚ್ಚಿಗೆಯನ್ನು ಕಲ್ಪಿಸುತ್ತದೆ, ರಾಮರಾಯ ವ್ಯಕ್ತಿತ್ವವನ್ನು ತಿಳಿಸಿರುವ ಇವರ ಅಭಿಪ್ರಾಯಗಳು ಪ್ರಶಂಸನೀಯವಾಗಿದೆ.

### ೩. ಬರವಣಿಗೆ ಕುರಿತಾದ ಮಾಹಿತಿ

'ಕೆಲವು ನೆನಪುಗಳು' ಕೃತಿಯನ್ನು ತಿ.ತಾ.ಶರ್ಮರು ತಮ್ಮ ಮೆಚ್ಚುನುಡಿಯಲ್ಲಿ ಈ ರೀತಿಯಾಗಿ ವಿಮರ್ಶಿಸಿದ್ದಾರೆ. "ಕೆಲವು ನೆನಪುಗಳು ನಾನು ಮೇಲಿಂದ ಮೇಲೆ ಓದಿ ಆನಂದ ಪಟ್ಟಿದ್ದೇನೆ. ಓದಿದ ಒಂದೊಂದು ಸಲವೂ ಒಂದೇ ಗುಣ, ಒಂದೇ ಪ್ರಮಾಣದ ಸುಖವನ್ನು ಅನುಭವಿಸಿದ್ದೇನೆ. ಆ ಸುಖವನ್ನು ವಿವರಿಸಿ ಹೇಳಲಾರೆ. ಆ ಸುಖ ಕಿವಿ ತಾಕುವುದಿಲ್ಲ, ನಾಲಗೆ ನುಡಿಯುವುದಿಲ್ಲ, ಹೃದಯ ಸೋಕುವುದು. ಮನಸ್ಸು ಇಂಗಿತ ಕುಶಲಿ, ಮಾತು ಮಿತಿಗೊಂಡ ಸಂಕೇತ"[೯] ಎಂದು ಹೇಳಿದ್ದಾರೆ.

ತಿ.ತಾ.ಶರ್ಮರು ಕೃತಿಯ ಓದಿನಿಂದಾಗಿ ಸಿಕ್ಕಂತಹ ಅನುಭವವನ್ನು ಹಂಚಿಕೊಂಡಿದ್ದಾರೆ. ಕೃತಿಯನ್ನು ಓದಿದಾಗ ಸಿಗುವ ಆನಂದ, ಸುಖವನ್ನು ಸೂಕ್ತವಾಗಿ ಹೇಳಿದ್ದಾರೆ. ಓದಿದ ಒಂದೊಂದು ಸಲವೂ, ಒಂದೇ ಗುಣ, ಒಂದೇ ಪ್ರಮಾಣದ ಸುಖವನ್ನು ಅನುಭವಿಸಿದ್ದೇನೆ. ಎಂಬುದರಲ್ಲಿ ವಿಶೇಷವಿಲ್ಲ ಎನಿಸುತ್ತದೆ. ಕೃತಿಯನ್ನು ಓದಿದ ಒಂದೊಂದು ಸಲವೂ ಒಂದೊಂದು ರೀತಿಯ ಗುಣಗಳು, ಬೇರೊಂದು ರೀತಿಯ ವೈಶಿಷ್ಟಗಳು ಸಿಗುತ್ತವೆ. ರಾಮರಾವ್‌ರು ಕೌಟುಂಬಿಕ ಜೀವನ ಬರೆದುಕೊಂಡವರಲ್ಲ, ವೃತ್ತಿ ಬದುಕಿನ ಅನುಭವಗಳನ್ನು ಬರೆದುಕೊಂಡಿದ್ದಾರೆ. ಈ ಅನುಭವಗಳ ಜೊತೆಯಲ್ಲಿ ಉಳಿದ ಪಾತ್ರಗಳನ್ನು ಇತರೆ ಸಂದರ್ಭಗಳನ್ನು ಮುಖ್ಯವಾಗಿಸಿದ್ದಾರೆ. ಲೇಖಕರ ಸಾಹಸದ ಬದುಕನ್ನು ನೆನೆಯುವುದರ ಜೊತೆಗೆ ಮೈಸೂರು ಭಾಗದ ಸಾಂಸ್ಕೃತಿಕ ಜಗತ್ತನ್ನೆ ತೂರಿಸಿದಂತೆ ತಿಳಿದುಬರುತ್ತದೆ. ಕೃತಿಯನ್ನು ಓದಿದಾಗ ಒಂದೇ ಗುಣ ಕಾಣದೆ ಭಿನ್ನವಾದ ಗುಣಗಳು ವಿಶೇಷತೆಗಳು ಕಂಡುಬರುವ ಸಾಧ್ಯತೆಯಿದೆ.

ತಿ.ತಾ.ಶರ್ಮರು ಲೇಖಕರ ಬರವಣಿಗೆಯನ್ನು ಕುರಿತು ಈ ರೀತಿಯಾಗಿ ವಿಮರ್ಶಿಸಿದ್ದಾರೆ. "ಕನ್ನಡಿಗ ಭಾಗ್ಯಕ್ಕೆ ಎಣೆ ಇಲ್ಲ. ಕೆಲವು ನೆನಪುಗಳು, ಕೇವಲ ಸಾಹಿತ್ಯವಲ್ಲ, ಕಾವ್ಯ, ಕಲೆ, ದರ್ಶನ, ಜೀವನ ಮಹಾಧರ್ಮ ಈ ಕೃತಿ, ಈ ಸಾಹಿತ್ಯ, ಸ್ವರೂಪ, ಕನ್ನಡಕ್ಕೆ ಹೊಸದು"[೯] ಎಂದಿದ್ದಾರೆ.

ತಿ.ತಾ.ಶರ್ಮರ 'ಕೆಲವು ನೆನಪುಗಳು' ಕೃತಿಯ ಬಗೆಗಿನ ಈ ವಿಮರ್ಶೆಯು ಪ್ರಶಂಸನೀಪಾದದ್ದು. ಕನ್ನಡದ ಮಟ್ಟಿಗೆ ಹೊಸತನದಿಂದ ಕೂಡಿದ ಕತೆಯಾಗಿಸಿದ್ದಾರೆ. ಸಹೃದಯರ ಭಿನ್ನರುಚಿಗಳಿಗೆ ತಕ್ಕಂತೆ ಕಾವ್ಯ, ಕಲೆ, ದರ್ಶನ, ಜೀವನ ಮಹಾಧರ್ಮ ಎನಿಸದಿರದು ಕನ್ನಡಕ್ಕೆ ನೀಡಿದ ಕೊಡುಗೆಗಳಲ್ಲಿ ನೆನಪುಗಳ

ಕೃತಿಯು ಸಾಹಿತ್ಯ ಸ್ವರೂಪದಲ್ಲಿ ಹೊಸತನದಿಂದ ಕೂಡಿದೆ. ತಿ.ತಾ.ಶರ್ಮರ ಕೃತಿಯ ಬಗೆಗಿನ ದೃಷ್ಟಿಕೋನ ಕೃತಿಗೆ ಮತ್ತಷ್ಟು ಮೆರಗು ನೀಡಿದಂತಿದೆ.

ಈ ಕೃತಿಯಲ್ಲಿನ ಅನ್ಯಭಾಷಾ ಪದಗಳ ಬಳಕೆಯಿಂದಾಗಿ ಸಾಹಿತಿಗಳು ಒಪ್ಪುತ್ತಾರೆಯೇ ಎಂಬ ಲೇಖಕರ ಪ್ರಶ್ನೆಗೆ ತಿ.ತಾ.ಶರ್ಮರ ಹೇಳಿಕೆಯು ಈ ರೀತಿಯಿದೆ. “ಅವರು ರಚಿಸಿರುವ ಸಹಜ ಕಾವ್ಯಕ್ಕೆ ಅವರು ಹಿಡಿದಿರುವ ಮಾರ್ಗವೇ ಸಾದು; ಅವರು ಬಳಸಿರುವ ಮಾತುಗಳೇ ಸ್ಪಷ್ಟ. ಸಾಹಿತಿಗಳೇಕೆ ಒಪ್ಪುವುದಿಲ್ಲ? ನೆನಪಿನ ಸಾಹಿತ್ಯ ಸಹಜವಾದುದು; ಪ್ರಾಮಾಣಿಕತೆಯಿಂದ ಕೂಡಿದುದು. ಈ ಸಾಹಿತ್ಯದಲ್ಲಿ ವೈದರ್ಭಿ, ಗೌಡಿ, ಪಾಂಚಾಲೀ, ಲಾಟಿಕಾ ಲಕ್ಷಣಗಳನ್ನು ಕಾಣಬಯಸುವುದು ವಿವೇಕವಲ್ಲ”[೧] ಎಂದು ಅಭಿಪ್ರಾಯ ಪಟ್ಟಿದ್ದಾರೆ.

ತಿ.ತಾ.ಶರ್ಮರ ಈ ಹೇಳಿಕೆಯು ಕೃತಿಯ ಮಟ್ಟಿಗೆ ವಿಶೇಷವಾದ ಲಕ್ಷಣಗಳನ್ನು ಪ್ರತಿಬಿಂಬಿಸಿದಂತಿದೆ. ರಾಯರಿಗಿದ್ದ ಪಾಂಡಿತ್ಯ, ಸಹಜ ಬರವಣಿಗೆಯು ಸಾಹಿತ್ಯ ವಲಯಕ್ಕೆ ಹೊಸದೊಂದು ಪ್ರೇರಣೆಯನ್ನು ನೀಡಿದಂತಾಗಿದ್ದೂ ಚರ್ಚಿತ ವಿಷಯವಾಗಿತ್ತು. ಸಾಹಿತ್ಯದ ರೂಪುರೇಷೆಗಳನ್ನು ದಿಕ್ಕರಿಸುವ ಅವರ ರಚನಾ ಶೈಲಿ ಕುತೂಹಲಕಾರಿಯಾಗಿದೆ. ಸಾಹಿತ್ಯದ ಚೌಕಟ್ಟನ್ನು ಹೊರತು ಪಡಿಸಿ ಲೇಖಕರು ಬರೆದಿದ್ದು ಕೃತಿಯ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ತಿ.ತಾ.ಶರ್ಮರ ಈ ಹೇಳಿಕೆಯು ಸೂಕ್ತವಾದದ್ದಾಗಿದೆ.

ಗಿರಡ್ಡಿ ಗೋವಿಂದರಾಜರು ‘ಮರೆಯಬಾರದ ಹಳೆಯ ಕತೆಗಳು’ ಪುಸ್ತಕದಲ್ಲಿ ಲೇಖಕರ ಸಣ್ಣಕಥೆಗಳ ಕುರಿತು ವಿಮರ್ಶಿಸಿದ್ದಾರೆ. ಸಣ್ಣಕಥೆಗಳು ‘ಕೆಲವು ನೆನಪುಗಳು’ ಗ್ರಂಥದಿಂದ ಎತ್ತಿಕೊಂಡ ಭಾಗಗಳಾಗಿ ಕಾಣುತ್ತವೆ. ಕತೆಗಾರಿಕೆಯ ದೃಷ್ಟಿಯಿಂದ ಸಡಿಲವಾಗಿದ್ದರೂ, ವ್ಯಾಪಕ ಅನುಭವ, ಆಳವಾದ ತಿಳುವಳಿಕೆ, ಸರಳ ನಿರೂಪಣೆಗಳಿಂದ ಈ ಕಥನಗಳು ಆಕರ್ಷಕವಾಗಿದೆ. ಆದರೆ ತಾವರೆಕೋಟೆ ತೀರಾ ಬೇರೆ ರೀತಿಯ ಕಥೆ ಅಂದಿಗೂ ಇಂದಿಗೂ ವಿಶಿಷ್ಟವಾದ ಬರವಣಿಗೆಯಾಗಿದೆ. ಅವರ ಸಣ್ಣಕತೆಯ ಸ್ವರೂಪದ ದೃಷ್ಟಿಯಿಂದ ಅತ್ಯಂತ ಪರಿಪೂರ್ಣವಾದದು. ಯಾಕೋ ಈ ಕಥೆ ವಿಮರ್ಶಕರ ಗಮನ ಸೆಳೆದಿಲ್ಲ[೨] ಎಂದಿದ್ದಾರೆ.

ಗಿರಡ್ಡಿ ಗೋವಿಂದ ರಾಜರ ಪ್ರತಿಯೊಂದು ಅಭಿಪ್ರಾಯಗಳು ಗಮನಿಸಿದಾಗ ಸಣ್ಣಕತೆಯ ಬಗೆಗೆ ವಿಶೇಷವಾದ ಬೆಳಕು ಚೆಲ್ಲಿದಂತಿದೆ. ತಾವರೆಕೋಟೆಯ ಕಥಾವಸ್ತು ಯಾವಕಾಲಕ್ಕೂ ಹೊಂದಿಕೊಳ್ಳುವಂತೆ ಲೇಖಕರು ರಚಿಸಿದ್ದರಿಂದಲೇ ಭಿನ್ನವಾಗಿ ನಿಲ್ಲುತ್ತದೆ. ಲೇಖಕರ ಸಣ್ಣಕತೆಗಳ ಮೇಲೆ ವಿಮರ್ಶೆಗಳು ಬಂದಿರುವುದು ತೀರ ವಿರಳವಾಗಿದೆ. ಸಾಹಿತ್ಯ ವಲಯದಲ್ಲಿ ಉತ್ತಮ ಕೃತಿಗಳು ವಿಮರ್ಶಕರ ಕಣ್ಣಿಗೆ ಗೋಚರವಾಗಿದೆ. ಮರೆಯಾಗಿರುವುದು ಸತ್ಯವಾಗಿದೆ. ‘ಕೆಲವು ನೆನಪುಗಳು’ ಕೃತಿಯು ಇದಕ್ಕೆ ಹೊರತಾಗಿಲ್ಲ. ಸಹಜ ಕಲಾತ್ಮಕ ಬರಹಗಾರನ ಬದುಕನ್ನು ಗುರುತಿಸುವಲ್ಲಿ ವಿಫಲರಾಗಿದ್ದಾರೆ.

ಲಕ್ಷ್ಮಣರಾಯನ ಭಾಗ್ಯ ಕತೆಯನ್ನು ಕುರಿತು ಅ.ನ.ಕೃಷ್ಣರಾಯರು ತಮ್ಮ ಕೃತಿಯಲ್ಲಿ ಅಪರಿಪಕ್ವ ಪ್ರಣಯ ಕಥೆಗಳೇ ಸಮೃದ್ಧವಾಗಿ ಪ್ರಕಟವಾಗುತ್ತಿದ್ದ ಕಾಲದಲ್ಲಿ ಇದೊಂದು ತೀರ ಹೊಸ-ವಸ್ತುವನ್ನು ಒಳಗೊಂಡ ಕತೆ”[೩] ಎಂದಿದ್ದಾರೆ.

ಅ.ನ.ಕೃರವರ ಅಭಿಪ್ರಾಯಗಳು ನಿಜವಾಗಿ ನವೋದಯದಂತಹ ಕಾಲಘಟ್ಟದಲ್ಲಿ ರಚಿಸಿದ ಲೇಖಕರು ಯಾವುದೇ ಪಂಥಗಳಿಗೆ ಸೀಮಿತವಾಗಿ ರಚಿಸಲಿಲ್ಲ. ಸರಳವಾದ ಕಥಾವಸ್ತು, ನಿರೂಪಣೆ, ತಂತ್ರಗಾರಿಕೆಯ ಶೈಲಿಯಲ್ಲಿಯೂ ಹೊಸತನವನ್ನು ಮೂಡಿಸಿರುವುದು ಅವರ ಸಣ್ಣ ಕಥೆಗಳಿಂದ ಸ್ಪಷ್ಟವಾಗುತ್ತದೆ. ನವೋದಯದ ಪ್ರಣಯಗಾರಿಕೆಯಿಂದ ಹೊರತಾಗಿ ಬರೆದದ್ದೆ ವಿಶೇಷವಾಗಿ ನಿಲ್ಲುವಂತೆ ಮಾಡಿದೆ.

ತಾವರೆಕೋಟೆ ಕತೆಯನ್ನು ಗಿರಡ್ಡಿ ಗೋವಿಂದ ರಾಜರು ತಮ್ಮ ಕೃತಿಯಲ್ಲಿ ಹೀಗೆ ವಿಮರ್ಶಿಸಿದ್ದಾರೆ. 'ತಾವರೆ ಕೋಟೆ ನವೋದಯ ಕಾಲದ 'ಇಂದಿರೆಯೋ ಅಲ್ಲವೋ? ಅದಂತ ಕನಸಿನ ಕಥೆಗಳಿಗೆ ಮತ್ತು ನವ್ಯ ಕಥೆಗಳಲ್ಲಿಯ ಪ್ಯಾಂಟಸಿಗಳ ನಡುವೆ ನಿಲ್ಲುವ ಕತೆಯಿದು. ನವೋದಯದ ಕತೆಗಳಲ್ಲಿ ವಾಸ್ತವ ಮತ್ತು ಕನಸುಗಳು ಪ್ರತ್ಯೇಕವಾಗಿಯೇ ಇರುತ್ತವೆ. ನವ್ಯ ಕತೆಗಳಲ್ಲಿ ಪ್ಯಾಂಟಸಿ ವಾಸ್ತವದ ಭಾಗವಾಗಿಯೇ ಬರುತ್ತವೆ' ಎಂಬುದಾಗಿ ತಿಳಿಸಿದ್ದಾರೆ. ಗಿರಡ್ಡಿಯವರ ಈ ವಿವರಣೆಯಲ್ಲಿ ವಿಶೇಷತೆ ಏನೂ ಕಂಡುಬಂದಿಲ್ಲ. ಮಾಸ್ತಿಯವರ ಇಂದಿರೆಯೋ ಅಲ್ಲವೋ? ಕತೆಯು ಲೇಖಕರ ಮೇಲೆ ಪ್ರಭಾವ ಬೀರಿತ್ತು. ಬರಹಗಾರನೊಬ್ಬನಿಗೆ ತನ್ನದೇ ಆದ ದೃಷ್ಟಿಕೋನವಿರುತ್ತದೆ. ನವೋದಯದ ಕತೆಗಳ ನಡುವಿನ ವ್ಯತ್ಯಾಸ ಗುರುತಿಸಬಹುದೇ ವಿನಃ ಅದನ್ನು ಸಂಪೂರ್ಣವಾಗಿ ಒಪ್ಪಲೂ ಬಾರದು. ಲೇಖಕರು ತಮ್ಮ ಕತೆಗಳಲ್ಲಿ ವಾಸ್ತವ ಮತ್ತು ಕಲ್ಪನೆಗಳ ನಡುವಿನ ವ್ಯತ್ಯಾಸವನ್ನು ಸಹಜವಾದ ರೀತಿಯಲ್ಲಿ ಜಾಣತನದಿಂದ ಅಳಿಸಿದ್ದು ಗಿರಡ್ಡಿಯವರ ಅಭಿಪ್ರಾಯ ಒಪ್ಪುವುದು ಕಷ್ಟವೆನಿಸುತ್ತದೆ.

ತ.ಸು.ಶಾಮರಾಯರು ತಮ್ಮ 'ಸ್ವಸ್ತಿ' ಕೃತಿಯಲ್ಲಿ ಈ ರೀತಿಯ ಅಭಿಪ್ರಾಯ ಪಟ್ಟಿದ್ದಾರೆ. ಕೆಲವು ನೆನಪುಗಳು ಒಂದು ಆತ್ಮಕಥೆಯಲ್ಲ, ಆದರೆ 'ರಂಗಣ್ಣನ ಕನಸಿನ ದಿನಗಳು' ಗ್ರಂಥದಂತೆ ಇದನ್ನು ಸಂಪೂರ್ಣವಾಗಿ ಆತ್ಮಕಥೆಯ ಚೌಕಟ್ಟಿನಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಎಂ.ಆರ್.ಶ್ರೀ.ಯವರು ತಮ್ಮ ಅಧಿಕಾರಾವಧಿಯ ಅನುಭವಗಳನ್ನು ಚಿತ್ರಿಸಿದಂತಿದೆ"[೨] ಎಂದಿದ್ದಾರೆ.

ತ.ಸು.ಶಾಮರಾಯರ ಅಭಿಪ್ರಾಯದಲ್ಲಿ ಯಾವುದೇ ಹುರುಳಿಲ್ಲ. ಲೇಖಕನೊಬ್ಬನ ಅನುಭವಗಳನ್ನು ಬರೆದಿದ್ದು ಈ ಕೃತಿಯ ವಿಶಿಷ್ಟತೆಯಾಗಿದೆ. ಈ ಕೃತಿಯು ಶ್ರೇಷ್ಠ ಕಾದಂಬರಿಗಿಂತಲೂ ವಿಶಿಷ್ಟವಾಗಿ ರಚನೆಯಾಗಿರುವುದು ತಿಳಿದುಬರುತ್ತದೆ. ಎಂ.ಆರ್.ಶ್ರೀ. ರಂಗಣ್ಣನ ದಿನಗಳಿಗಿಂತಲೂ ಭಿನ್ನವಾಗಿ ಮೂಡಿಬಂದಿರುವುದು ಇದರ ಶ್ರೇಷ್ಠತೆಗೆ ಸಾಕ್ಷಿಯಾಗಿದೆ. ಲೇಖಕರ ಅನುಭವಗಳನ್ನು ಹೊರತು ಪಡಿಸಿ ಬೇರೊಂದು ಪಾತ್ರಗಳು ಒಂದೊಂದು ಕತೆಯಾಗಿ ನಿಲ್ಲುವಂತೆ ಗೋಚರಸುವುದು ಇದಕ್ಕೆ ನಿದರ್ಶನವಾಗಿದೆ. ಶಾಮರಾಯರು 'ಕೆಲವು ನೆನಪುಗಳು' ಗ್ರಂಥವನ್ನು ಪುಟ್ಟ ಮಹಾಭಾರತವೆಂದು ಕರೆದಿರುವುದು ಇದರ ಮಹತ್ವವನ್ನು ಸಾರುವಂತಿದೆ.

ಕೆಲವು ನೆನಪುಗಳು ಕೃತಿಯನ್ನು ಹಲವು ದೃಷ್ಟಿಗಳಿಂದ ಒಂದು ಸುಂದರ ಚಿತ್ರಶಾಲೆ. ಇಂಥ ಅಧಿಕಾರಿ ಜೀವನದ ಒಂದು ಇತಿಹಾಸವನ್ನೇ ಬರೆದು ರಾಮರಾವ್‌ರು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ."[೩] ಎಂದು ತ.ಸು.ಶಾಮರಾಯರು ತಿಳಿಸಿದ್ದಾರೆ.

ಶಾಮರಾಯರ ಅನಿಸಿಕೆಗಳು ಓದುಗರ ಮನೋಭಾವವನ್ನು ತಟ್ಟುವಂತಿವೆ. ಈ ಕೃತಿಯಲ್ಲಿ ಸ್ವಾರಸ್ಯಕತೆಯೂ ನಿರಂತರವಾಗಿ ಕಾಡುತ್ತದೆ. ಲೇಖಕರ ಒಂದೊಂದು ಅನುಭವವು ಒಂದೊಂದು ಕತೆಯಾಗುವಂತಿವೆ. ನವರಸದಿಂದ ಕೂಡಿದ ಕತೆಯಾಗಿಸಿದ್ದಾರೆ. ಮೈಸೂರು ಭಾಗದ ಸಾಂಸ್ಕೃತಿಕ ಮಹತ್ವ ಸಾರುವಂತಿರುವುದರಿಂದ ರಾಮರಾಯರು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿರುವಂತೆ ಕಂಡುಬರುತ್ತಾರೆ.

ನವರತ್ನ ರಾಜಾರಾಮ್‌ರು ಹೇಳುವಂತೆ ರಾಮರಾವ್‌ರು ಸುಸಂಸ್ಕೃತರು ಮತ್ತು ಬಹುಮುಖಿ ವಿದ್ವಾಂಸರು, ಕನ್ನಡ, ಇಂಗ್ಲೀಷ್, ಸಂಸ್ಕೃತ ಮತ್ತು ಫ್ರೆಂಚ್ ಭಾಷೆಗಳಲ್ಲಿ ಸಾಹಿತ್ಯ ಜ್ಞಾನವಿತ್ತು. ನಾನು ಪುಣೆಯಲ್ಲಿದ್ದಾಗ ಅವರಿಗೆ ಮರಾಠಿ ಕಾದಂಬರಿಗಳನ್ನು ತಂದುಕೊಟ್ಟಿದ್ದು ನೆನಪಿದೆ. ಅವರಷ್ಟು ನಾಟಕಕಾರ, ಶೇಕ್ಸ್‌ಪಿಯರ್‌ನ ಸಾಹಿತ್ಯದಲ್ಲಿದ್ದ ಆಳವಾದ ಜ್ಞಾನವನ್ನು ಸರಿಗಟ್ಟುವ ಪಂಡಿತರನ್ನು ಭಾರತ ಮಾತ್ರವಲ್ಲ ಇಂಗ್ಲೆಂಡ್ ಅಮೇರಿಕೆಗಳಲ್ಲಿಯೂ ನಾನು ನೋಡಿಲ್ಲ[೬] ಎಂದಿದ್ದಾರೆ.

ನವರತ್ನ ರಾಜಾರಾಮ್‌ರ ಹೇಳಿಕೆಯನ್ನು ನಂಬಲು ಅಸಾಧ್ಯವೆಂಬಂತಿವೆ. ರಾಮರಾವ್‌ರು ಬಹುಭಾಷಾ ಪಂಡಿತರಾಗಿದ್ದಾರೆ. ಬೇರೊಂದು ಪಾಂಡಿತ್ಯಕ್ಕೆ ಸಮಾನಾಗಿ ನಿಲ್ಲುವಷ್ಟು ಗಂಭೀರವಾದ ಸಾಹಿತ್ಯದ ರಚನೆಯಾಗಿಲ್ಲವೆಂಬುದು ಸತ್ಯವಾಗಿದೆ. 'ಕೆಲವು ನೆನಪುಗಳು' ಉತ್ತಮ ಕೃತಿಯ ಹೊರತಾಗಿ ಅವರು ಸಾಹಿತ್ಯಕ್ಕೆ ವಿಶೇಷ ಕೊಡುಗೆ ಏನು ನೀಡಿಲ್ಲ, ಹಾಗಾಗಿ ರಾಜಾರಾಮ್‌ರ ಹೇಳಿಕೆಯಲ್ಲಿ ವಿಶೇಷತೆ ಕಂಡುಬರುವುದಿಲ್ಲ.

ತಿ.ತಾ.ಶರ್ಮರು ಕೃತಿಯ ಬರಹ ಕುರಿತಾದ ವಿಮರ್ಶೆಯು ಈ ರೀತಿಯಾಗಿದೆ. "ಕೇವಲ ಸಾಹಿತ್ಯವಲ್ಲ, ಕಾವ್ಯ, ಕತೆ, ಕಲೆ, ದರ್ಶನ, ಜೀವನ ಮಹಾಧರ್ಮ! ಈ ಕೃತಿ ಈ ಸಾಹಿತ್ಯ, ಸ್ವರೂಪ, ಕನ್ನಡಕ್ಕೆ ಹೊಸದು"[೭] ಎಂದಿದ್ದಾರೆ.

ತಿ.ತಾ.ಶರ್ಮರ ಈ ನುಡಿಗಳಲ್ಲಿ ವಿಶೇಷತೆಯಿದೆ. ನೆನಪುಗಳು ಕೃತಿಯು ಕೇವಲ ಒಂದು ದೃಷ್ಟಿಕೋನದಿಂದ ಬರೆದಂತಿಲ್ಲ, ಅದರ ವಿಚಾರದ ವಿಸ್ತೀರ್ಣವೇ ಭಿನ್ನವಾದದ್ದು. ಸಾಹಿತ್ಯಿಕ ಕೃತಿಯಾಗದೇ ಹತ್ತು ಹಲವಾರು ರಂಗಗಳಲ್ಲಿನ ವಿಚಾರಗಳನ್ನು ಹದವಾಗಿ ಬೆರೆಸಿದ್ದಾರೆ. ಸಾಂಸ್ಕೃತಿಕ ಪರಂಪರೆಯನ್ನೇ ತಮ್ಮ ಅನುಭವಗಳ ಮೂಲಕ ಎತ್ತಿ ಹಿಡಿದಂತಿದೆ.

### ೪. ಅಧಿಕಾರಾವಧಿಯ ದಕ್ಷತೆ

ನವರತ್ನ ರಾಮರಾವ್ ಅವರ ಅಧಿಕಾರಾವಧಿಯ ದಕ್ಷತೆಯ ನವರತ್ನ ಲಕ್ಷ್ಮಣ ಈ ಕುರಿತು ಮಾಹಿತಿ ಒದಗಿಸಿದ್ದು ಹೀಗೆ, ಅವರು ಹಳೆಯ ಮೈಸೂರು ಸಂಸ್ಥಾನದ ಸರ್ಕಾರದಲ್ಲಿ ಅನೇಕ ಹಿರಿಯ ಹುದ್ದೆಗಳನ್ನಾಲಂಕರಿಸಿ, ಅತ್ಯಂತ ದಕ್ಷ ಮತ್ತು ಪ್ರತಿಭಾವಂತ ಅಧಿಕಾರಗಳಲ್ಲೊಬ್ಬರಾಗಿದ್ದಾರೆ. ಮೈಸೂರು ಸರ್ಕಾರ ಇಡೀ ದೇಶದಲ್ಲೇ ಮಾದರಿ ಸರ್ಕಾರವೆಂದು ಪರಿಗಣಿಸಲ್ಪಟ್ಟ ಕೀರ್ತಿಗೆ ಭಾಗಿಗಳಾದ್ದರು. ಅವರ ಕಾರ್ಯದಕ್ಷತೆಯಿಂದಾಗಿ ೧೯೩೦ರಲ್ಲಿ ದಿವಾನ್ ಮಿರ್ಜಾ ಇಸ್ಮಾಯಿಲ್ ಜೊತೆಗೂಡಿ "ರೌಂಡ್

ಟೇಬಲ್ ಕಾನ್ಫರೆನ್ಸ್"ರಲ್ಲಿ ಭಾಗವಹಿಸಿದ್ದು ಇವರ ಕಾರ್ಯದಕ್ಷತೆಗೆ ಸಾಕ್ಷಿಯಾಗಿದೆ. ಮೈಸೂರಿನ ಪಂಚಲಿಂಗೇಶ್ವರ ದೇವಸ್ಥಾನದ ಜೀರ್ಣೋದ್ಧಾರ ಮಾಡಿರುವುದು, ಮೆಡಿಕಲ್ ಕಾಲೇಜ್‌ನ್ನು ಮೈಸೂರಿನಲ್ಲಿ ಸ್ಥಾಪಿಸಿದ್ದು ಅವರ ಅಧಿಕಾರಾವಧಿಯ ದಕ್ಷತೆಯ ನಿದರ್ಶನವಾಗಿದೆ"[೬] ಎಂದು ತಿಳಿಸಿದ್ದಾರೆ.

ನವರತ್ನ ಲಕ್ಷ್ಮಣ್‌ರವರ ಈ ಮಾಹಿತಿಯು ತಂದೆಯ ಕುರಿತು ತಿಳಿಸಿದ ಗೌರವಾತ್ಮಕ ಮಾಹಿತಿಯಂತೆ ಕಂಡು ಬರುತ್ತವೆ. ಈ ಮೇಲಿನ ಮಾಹಿತಿಯು ಲೇಖಕರ ವ್ಯಕ್ತಿತ್ವದ ಬಗ್ಗೆ ಸತ್ಯದ ಸಂಗತಿಯಾಗಿದೆ. ಮೈಸೂರು ಸರ್ಕಾರದಲ್ಲಿ ನಿಷ್ಠುರ ವ್ಯಕ್ತಿತ್ವದ ದಕ್ಷ ಅಧಿಕಾರಿಯಾಗಿದ್ದರು ಎಂದು ವಿವಿಧ ಲೇಖಕರು ತಿಳಿಸಿದ್ದಾರೆ.

ತಿ.ತಾ.ಶರ್ಮರು ಮೆಚ್ಚುನುಡಿಯಲ್ಲಿ ರಾಮರಾವ್‌ರ ಅಧಿಕಾರಾವಧಿಯ ದಕ್ಷತೆಯ ಕುರಿತು ಈ ರೀತಿಯಾಗಿ ಹೇಳಿದ್ದಾರೆ. "ಈ ಕೃತಿಯು ಪೂರ್ಣ ಮತ್ತು ನಿಷ್ಪಕ್ಷಪಾತ ಚಿತ್ರಕೂಟವೇ 'ಕೆಲವು ನೆನಪುಗಳು' ಚಿತ್ರಗಾರರಾದರೋ ವೃತ್ತಿಕುಶಲರು, ಕರ್ಮಕೌಶಲವನ್ನು ಮೀರಿಸಿದ ಉದಾರ ಮತ್ತು ಸಹಾ ಭೂತಿ ಹೃದಯರು, ಒಂದು ಮಾತಿನಲ್ಲಿ ಹೇಳುವುದಾದರೆ ಅಂದು ತಾಲ್ಲೂಕಿನ ಸಮಾಜಕ್ಕೆ ಅಮಲ್ದಾರರು ನಿರಂಕುಶ ನಾಯಕರಂತಿದ್ದರು"[೭] ಎಂದು ಹೇಳಿದ್ದಾರೆ.

ತಿ.ತಾ.ಶರ್ಮರ ವಿಮರ್ಶೆಯಲ್ಲಿ ರಾಮರಾವ್ ಅವರು ಅಧಿಕಾರಾವಧಿಯಲ್ಲಿ ನಿರಂಕುಶ ನಾಯಕರಂತೆ ಕಂಡುಬರುವುದು ಗಮನಿಸಬಹುದಾಗಿದೆ. ಆತ್ಮಕಥೆಯನ್ನು ಗಮನಿಸಿದಾಗ ನಿಷ್ಪಕ್ಷಪಾತ ಸಹೃದಯದ ಮನೋಭಾವ ಹೊಂದಿದವರಾಗಿದ್ದಾರೆ. ಅವರ ವ್ಯಕ್ತಿತ್ವವು ಪ್ರತಿ ಪುಟಗಳಲ್ಲೂ ಭಿನ್ನವಾಗಿ ಕಂಡುಬಂದಿದ್ದು, ಸಾಂಸ್ಕೃತಿಕ ಮಹಾ ಪುರುಷರೇ ಎಂಬಂತೆ ತಿಳಿದು ಬರುತ್ತಾರೆ.

ತ.ಸು.ಶಾಮರಾಯರು "ಸ್ವಸ್ತಿ" ಕೃತಿಯಲ್ಲಿ ರಾಮರಾವ್‌ರ ಕೃತಿಯ ವಿಮರ್ಶಾ ಲೇಖನದಲ್ಲಿ ಅವರ ದಕ್ಷತೆಯನ್ನು ಕುರಿತು ಈ ರೀತಿಯಿದೆ. ಪ್ರಕೃತ ಕೃತಿಯಲ್ಲಿ ಅವರ ಶಕ್ತಿಯನ್ನು ಪರಿಚಯಿಸುವ ಕೆಲವು ಲಘು ಪ್ರಸಂಗಗಳು ಕುತೂಹಲಕಾರಿಯಾಗಿವೆ. ಅಮಲ್ದಾರರು ಬುದ್ಧಿಬಲದ ಜೊತೆಗೆ ಇಂಥ ದೇಹಬಲದ ಸಾಹಸಗಳನ್ನು ತಮ್ಮ ಅಧಿಕಾರವಾದಿಯಲ್ಲಿ ತೋರಿಸಬೇಕಾಗಿ ಬಂದ ಸ್ವಾರಸ್ಯಗಳು ಕೃತಿಯ ಅನುಭವ ವೈವಿಧ್ಯವನ್ನು ಹೆಚ್ಚಿಸುತ್ತದೆ"[೮] ಎಂದು ಹೇಳಿದ್ದಾರೆ.

ತ.ಸು.ಶಾಮರಾಯರ ಈ ವಿಮರ್ಶೆಯು ಲೇಖಕರ ಪ್ರಾಮಾಣಿಕತೆ ಮತ್ತು ಅಧಿಕಾರದ ದಕ್ಷತೆಯನ್ನು ಕುರಿತು ಹೇಳಿರುವುದು ಸೂಕ್ತವಾಗಿದೆ. ಅವರಲ್ಲಿದ್ದ ವಿದ್ವತ್ತು, ಚತುರತೆ, ಸ್ವಾರಸ್ಯದ ಸಂಗತಿಗಳು ಅವರ ದಕ್ಷತೆಯನ್ನು ತಿಳಿಸಿದ ಸೂಕ್ಷ್ಮತೆಗಳಾಗಿವೆ. ಅವರ ಅಧಿಕಾರಾವಧಿಯು ಇಂತಹ ಹಲವು ವಿಚಾರಗಳನ್ನು ತಿಳಿಸುವ ವೈವಿಧ್ಯವನ್ನು ಸ್ಪಷ್ಟಪಡಿಸುತ್ತವೆ.

ಶರಣಮ್ಮ ಗೊರೇಬಾಳ ಅವರು ರಾಮರಾವ್‌ರ ದಕ್ಷತೆಯನ್ನು ಕುರಿತ ಹೇಳಿಕೆ ಈ ರೀತಿಯಿದೆ ಇವರಿಗೆ ಕುದುರೆ ಸವಾರಿ ಎಂದರೆ ಷೋಕಿ, ಬಂದೂಕು, ಪಿಸ್ತೂಲ ಅಂದರೆ ಪ್ರೇಮ, ಭರ್ಜರಿಕಾರಿಗಳು,

ಕ್ರಿಕೇಟ್, ಪುಟ್‌ಬಾಲ್ ಆಡಿದವರು, ಟೆನಿಸ್ ಆಟದಲ್ಲಾಸಕ್ತರು, ಒಳ್ಳೆಯ ಈಜುಗಾರರು, ಮಹಾಮೇಧಾವಿಗಳು, ಸಿವಿಲ್ ಸರ್ವಿಸ್ ಪಾಸ್ ಮಾಡಿದವರು. ಸೇಲಂದಲ್ಲಿ ವಕಾಲತ್ತು ನಡೆಸುತ್ತಿದ್ದರು. ಅಮಲ್ದಾರರಾಗಿ ಬಹಾದೂರಿ ಮ್ಯಾಜಿಸ್ಟ್ರೇಟ್ ಪಾಂಡುರಂಗ ಶೆಟ್ಟಿಗೆ ಸಜಾಕೊಟ್ಟವರು. ಬೆಂಕಿನವಾಬ ದುರಂಹಕಾರಿ, ರಸಿಕ, ಭಾವಿ ತೊಡಿಸಿ ಕೊಟ್ಟ ಮಹಾರಾಯ, ಹುಡುಗ ಸುಬೇದಾರ, ಎಂಬ ಇತ್ಯಾದಿ ಪ್ರಶಸ್ತಿಗಳನ್ನು ಪಡೆದಿದ್ದಾರೆ' ಎಂದು ತಿಳಿಸಿದ್ದಾರೆ.

ಶರಣಮ್ಮ ಗೊರೇಬಾಳ ಅವರು 'ಕೆಲವು ನೆನಪುಗಳು' ಕೃತಿಯ ವಿಮರ್ಶೆಯಲ್ಲಿ ವಿಶೇಷವೇನು ಗುರಿತಿಸಿದಂತಿಲ್ಲ, ಕೃತಿಯಲ್ಲಿ ವ್ಯಕ್ತವಾಂದತಹ ಮಾಹಿತಿಗಳನ್ನೇ ಕ್ರೋಢೀಕರಿಸಿ ಹೇಳಿದ್ದಾರೆ. ರಾಮರಾವ್‌ರಿಗೆ ಬಿರುದುಗಳನ್ನು ಪ್ರಶಸ್ತಿ ಎಂದು ದಾಖಲಿಸಿದ್ದು ಸೂಕ್ತವಾದುದಲ್ಲ. ಅವರ ಕೃತಿಯೇ ಪ್ರಾಮಾಣಿಕತೆ ಮತ್ತು ದಕ್ಷತೆಯನ್ನೇ ಪ್ರಧಾನವಾಗಿ ಬಿಂಬಿಸುತ್ತಿದ್ದು ಗೊರೇಬಾಳರವರು ಗುರುತಿಸುವಲ್ಲಿ ಎಡವಿದ್ದಾರೆ.

ರಾಮರಾವ್‌ರ ಮೊಮ್ಮಕ್ಕಳಲ್ಲಿ ಒಬ್ಬರಾದ ನವರತ್ನ ರಾಜಾರಾಮ್‌ರವರು ರಾಯರ ಅಧಿಕಾರದ ದಕ್ಷತೆಯನ್ನು ಕುರಿತು ಈ ರೀತಿಯಾಗಿ ಹೇಳಿದ್ದಾರೆ. ಅವರು ಶಕ್ತಿಯುತ ಅಧಿಕಾರಿಗಳು, ಬಹು ಮುಂಗೋಪಿ, ಬೆಂಕಿನವಾಬರು ಎಂದೇ ಹೆಸರುವಾಸಿಯಾಗಿದ್ದರು. ರಾಯರು ೧೯೦೫-೦೯ರಲ್ಲಿ ಎಡೆಯೂರು ಮತ್ತು ನರಸೀಪುರ ತಾಲ್ಲೂಕುಗಳಲ್ಲಿ ಅಮಲ್ದಾರರಾಗಿದ್ದರು. ನೂರಾರು ವರ್ಷಗಳಿಂದಲೂ ತಲಕಾಡಿನ ಮರುಳಿನಲ್ಲಿ ಹೂತುಹೋಗಿದ್ದ ಪಂಚಲಿಂಗದರ್ಶನ ದೇವಸ್ಥಾನಗಳನ್ನು ಹೊರತಂದು ರಾಜರಿಂದ ಪುನರುತ್ಥಾನ ಮಾಡಿಸಿ ಖ್ಯಾತಿ ಪಡೆದಿದ್ದರು. ಈ ದಕ್ಷಕಾರ್ಯಕ್ಕಾಗಿ ಬಹದ್ದೂರ್ ಅಮಲ್ದಾರ ರೆಂದು ಖ್ಯಾತರಾಗಿದ್ದರು' ಎಂದಿದ್ದಾರೆ.

ನವರತ್ನ ರಾಜಾರಾಮ್‌ರು ಬಹಳ ಚಿಕ್ಕಂದಿನಿಂದಲೇ ಹತ್ತಿರದಲ್ಲಿ ಬೆಳೆದವರು ಅವರ ಸಾಹಸಗಳನ್ನು ಕೇಳಿದ್ದರು. ಲೇಖಕರು ಕಾಡಿನಲ್ಲಿ ಷಿಕಾರಿ ಮಾಡುತ್ತಿದ್ದು, ಹಲವು ಸಾಹಸಗಳನ್ನು ಆಡಿ ಜನರಿಂದ ಮೆಚ್ಚಿಗೆಗಳಿಸಿವರು ಸಹಜವಾಗಿ ರಾಮರಾವ್‌ರನ್ನು ಹಲವಾರು ಹೆಸರುಗಳಿಂದ ಕರೆಯುತ್ತಿದ್ದರು. 'ಬಹದ್ದೂರ್ ಅಮಲ್ದಾರ್' ಎಂಬ ಬಿರುದು ಅವರ ಕಾರ್ಯದಕ್ಷತೆಗೆ ಸಾಕ್ಷಿಯಾಗಿದೆ.

ಒಟ್ಟಾರೆಯಾಗಿ ನವರತ್ನ ರಾಮರಾವ್‌ರ ಸಾಹಿತ್ಯ ಕುರಿತಾದ ವಿಮರ್ಶೆ ಲೇಖನಗಳು ಮುಖ್ಯವಾಗಿ ಲೇಖಕ ಕೇಂದ್ರಿತ ಲೇಖನಗಳಾಗಿ ಬಂದಿವೆ. ಆದರೂ ವಿಮರ್ಶಾಲೇಖನಗಳು ಅಧ್ಯಯನದ ಸಮೀಕ್ಷೆಯನ್ನು ಗ್ರಹಿಸಲು ಈ ವಿಮರ್ಶೆಗಳು ಸಹಕಾರಿಯಾಗುತ್ತವೆ. ಈ ಹಿನ್ನೆಲೆಯಲ್ಲಿ ಅಧ್ಯಯನವು ರಾಮರಾವ್‌ರ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲು ಸಹಕಾರಿಯಾಗಿದೆ.

* * *

## ಅಡಿಟಿಪ್ಪಣಿ

೧. ತಿ.ತಾ.ಶರ್ಮ, ಕೆಲವು ನೆನಪುಗಳು ಮೆಚ್ಚುನುಡಿ, ಪು-೩೭೦, ೩೭೧, ೩೮೭

೨. ತ.ಸು.ಶಾಮರಾಯ, ಸ್ವಸ್ತಿ, ಪು-೮೨, ೮೩, ೯೦

೩. ಗಿರಡ್ಡಿಗೋವಿಂದರಾಜ, ಮರೆಯಬಾರದ ಹಳೆಯ ಕತೆಗಳು, ಪು-೨೦೪, ೨೦೫

೪. ಶರಣಮ್ಮ ಅ. ಗೊರೇಬಾಳ, ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ, ಪು-೩೨೫, ೩೨೬ಟ

೫. ಕನ್ನಡ ವಿಷಯ ವಿಶ್ವಕೋಶ, ಮೈಸೂರು ಪ್ರಸಾರಾಂಗ, ಪು-೨೭೫, ೨೭೬

೬. ನವರತ್ನ ರಾಜಾರಾಮ್, ನವರತ್ನ ರಾಮರಾವ್ ಒಂದು ನೆನಪು, ಕರ್ಮವೀರ ಪತ್ರಿಕೆ, ಪು-೬೦

೭. ನವರತ್ನ ಲಕ್ಷ್ಮಣ್, ಕೆಲವು ನೆನಪುಗಳಲ್ಲಿ ಮುನ್ನುಡಿ, ಪು-೧

೮. ಮಾಸ್ತಿ ವೆಂಕಟೇಶ್ ಅಯ್ಯಂಗಾರ್, ನವರತ್ನ ರಾಮರಾವ್, ಪು-೬೩

# ಅಧ್ಯಾಯ - ಮೂರು

## ಆತ್ಮಕಥೆಗಳ ಪರಿಕಲ್ಪನಾತ್ಮಕ ಚರ್ಚೆ

ಪಾಶ್ಚಾತ್ಯರ ಪ್ರಭಾವದಿಂದಾಗಿ ಆಧುನಿಕತೆಯ ಪ್ರವೇಶವಾಗಿ ಹಲವಾರು ರಂಗಗಳಲ್ಲಿ ಗುರುತರವಾದ ಬದಲಾವಣೆ ಕಂಡು ಬಂದವು. ಸಾಹಿತ್ಯ ಕ್ಷೇತ್ರಗಳಲ್ಲೂ ಕಥೆ, ಕಾದಂಬರಿ, ಸಣ್ಣಕಥೆ, ಕಾವ್ಯ, ವಿಮರ್ಶೆ, ಪ್ರಬಂಧ, ಜೀವನ ಚರಿತ್ರೆ ಹೀಗೆ ಹಲವಾರು ಪ್ರಕಾರಗಳು ಬೆಳೆದು ಬಂದವು. ಆಧುನಿಕ ತಿಳುವಳಿಕೆಯಿಂದ ಆತ್ಮ ಕಥೆಯೂ ಬೆಳೆಯಿತು. ಮಾನವನ ಬದುಕು ಸಾಂಘಿಕವಾಗಿದ್ದು ವಿಶಿಷ್ಟವೂ ಆಗಿದೆ. ವ್ಯಕ್ತಿ ತನ್ನ ಬದುಕಿನಲ್ಲಾದ ನೋವು-ನಲಿವು, ಆಸರಿಕೆ-ಬೇಸರಿಕೆ, ಒಳಿತು-ಕೆಡುಕು, ಸಿಹಿ-ಕಹಿ ಘಟನೆಗಳನ್ನು, ಪ್ರಾಮಾಣಿಕವಾಗಿ ಆ ವ್ಯಕ್ತಿಯು ಜೀವನದ ಅನುಭವಗಳನ್ನು ಮುಚ್ಚು ಮರೆಯಿಲ್ಲದೆ ದಾಖಲೆಗೊಳಿಸುವ ಸಾರವತ್ತಾದ ನಿರೂಪಣೆಯೇ ಆತ್ಮಕಥೆ.

ಮಾನವನ ಆಸೆ-ಆಕಾಂಕ್ಷೆಗಳನ್ನು, ಬದುಕನ್ನು ನಿರೂಪಿಸುವಲ್ಲಿ ಮತ್ತು ಸಾಮಾಜಿಕ ಒರೆಕೋರೆಗಳನ್ನು ತಿದ್ದುವಲ್ಲಿ ಅತ್ಯಂತ ಪ್ರಭಾವಿ ಮಾಧ್ಯಮಗಳಲ್ಲಿ ಸಾಹಿತ್ಯವೂ ಒಂದು. ಹೀಗಾಗಿಯೇ ಸಾಮಾನ್ಯನಿಂದ ಶ್ರೇಷ್ಠನವರೆಗೂ ತನ್ನ ಜೀವನದ ಅನುಭವಗಳನ್ನು ದಾಖಲಿಸಿಕೊಳ್ಳುವ ಪ್ರಕಾರವಾಗಿ ಆತ್ಮಕಥೆ ಬೆಳೆದು ಬಂದಿದೆ. ಆತ್ಮಕಥೆ ಮತ್ತು ಜೀವನಚರಿತ್ರೆಗಳೆರಡೂ ಒಂದೇ ಅರ್ಥವೆಂಬಂತೆ ಕಂಡುಬಂದರೂ, ಎರಡು ಭಿನ್ನ ನಿಲುವುಗಳನ್ನು ಹೊಂದಿವೆ. ವ್ಯಕ್ತಿ ತನ್ನ ಜೀವನದ ವಿಚಾರಗಳನ್ನು ತಾನೆ ಬರೆದುಕೊಂಡಲ್ಲಿ ಆತ್ಮಕಥೆ ಎನಿಸಿಕೊಳ್ಳುತ್ತದೆ. ಅದನ್ನೇ ಇತರರು ಬರೆದಾಗ ಜೀವನ ಚರಿತ್ರೆಯಾಗುತ್ತದೆ.

೧೯೮೩ ರಲ್ಲಿ ಡ್ರೈಡನ್‌ನು ಮೊಟ್ಟ ಮೊದಲನೆಯದಾಗಿ 'ಬಯೋಗ್ರಫಿ' ಎಂಬ ಶಬ್ದವನ್ನು ಉಪಯೋಗಿಸಿದನು. ಬಯೋಗ್ರಫಿ ಎಂದರೆ ಜೀವನ ಚರಿತ್ರೆ. 'ಆಟೋಬಯೋಗ್ರಫಿ' ಎಂದರೆ ಆತ್ಮಚರಿತ್ರೆ. ಜೀವನ ಚರಿತ್ರೆ ನಿರ್ದಿಷ್ಟ ವ್ಯಕ್ತಿಯ ಬದುಕಿನ ಚರಿತ್ರೆಯಾಗುತ್ತದೆ. ಆದರೆ ಆತ್ಮಕಥೆ ತನ್ನ ಬದುಕಿನ ಕತೆಯನ್ನು ಹೇಳಿಕೊಳ್ಳುವ ವ್ಯಕ್ತಿಯದ್ದಾಗಿರುತ್ತದೆ.[೧]

'ಆತ್ಮ ಚರಿತ್ರೆಯನ್ನು Memoir ಮತ್ತು Diary or Journal ಗಳಿಂದ ಭೇರ್ಪಡಿಸಿ ನೋಡಬಹುದು. Memoir ಲೇಖಕನ ಆತ್ಮವಿಕಾಸವನ್ನು ಚಿತ್ರಿಸುವುದಕ್ಕಿಂತ ಹೆಚ್ಚಾಗಿ ಅದರೊಡನೆ ಅವನು ಬಲ್ಲ ವ್ಯಕ್ತಿಗಳ ಸಾಕ್ಷಿಯಾಗಿದ್ದ ಘಟನೆಗಳ ದಾಖಲೆಯಾಗಿರುತ್ತದೆ.''[೨]

ಆತ್ಮಕಥೆ ವ್ಯಕ್ತಿಯೊಬ್ಬನ ಚರಿತ್ರೆಯಾಗಿರುವಂತೆ ಆತನ ಸಮಾಜದ ಮತ್ತು ಪರಿಸರದ ಚರಿತ್ರೆಯೂ ಆಗಿರುತ್ತದೆ. ಕಥಾನಾಯಕ ತನ್ನ ಮತ್ತು ತನ್ನ ಸುತ್ತಮುತ್ತಲಿನ ಜೀವನವನ್ನು ತಾನು ಕಂಡಂತೆ ವರ್ಣಿಸಿರುತ್ತಾನೆ. ಆತ್ಮಚರಿತ್ರೆ ಕಟ್ಟುಕತೆಯಲ್ಲ. ಅದರಲ್ಲಿ ಅನುಭವ ನಿರೂಪಣೆ ಮತ್ತು ಸತ್ಯಾಂಶಗಳನ್ನೊಳಗೊಂಡ ಘಟನೆಗಳ ಪರಿಣಾಮಕಾರಿಯಾದ ವರ್ಣನೆಯಿರುತ್ತದೆ. ಇಂತಹ ವಿಶಿಷ್ಟತೆಗಳ ದಾಖಲೆಯು ಮುಂದಿನ ಪೀಳಿಗೆಗೆ 'ದಾರಿದೀಪ'ವಾಗಿ ಕಂಡುಬರುತ್ತವೆ. ಈ ಕಾರಣದಿಂದಾಗಿ ಗಣ್ಯರು, ಮಹಾಪುರುಷರು, ರಾಜಕಾರಣಿಗಳು, ಸಾಹಿತಿಗಳು, ವಿದ್ವಾಂಸರುಗಳು ಅನುಸರಿಸಿದ ಧ್ಯೇಯಗಳು, ಧೋರಣೆಗಳು ಹಾಗೂ ಅನುಭವದ ಘಟನೆಗಳನ್ನು ಬರವಣಿಗೆಯಲ್ಲಿ ಹಿಡಿದಿಡುವ ಮೂಲಕ ತಮ್ಮ ಚರಿತ್ರೆಯನ್ನು ಕಟ್ಟಿಕೊಳ್ಳುವುದು ಮತ್ತು ಮುಂದಿನ ಕಾಲಘಟ್ಟಕ್ಕೆ ಮಾದರಿಯಾಗಿರುವ ಉದ್ದೇಶವೂ ಆತ್ಮಕಥೆಗಳಲ್ಲಿ ಅಡಗಿರುತ್ತದೆ.

ಯುರೋಪ ಖಂಡದಲ್ಲಿ ಕ್ರೈಸ್ತಮತದಲ್ಲಿ ಪಾಪ ನಿವೇದನೆಯ ಸ್ವಭಾವ ಬೆಳೆದು ಆತ್ಮಕಥೆಯ ಅಂಶಗಳು ಅನೇಕ ಕೃತಿಗಳಲ್ಲಿ ದಾಖಲಾಗತೊಡಗಿದವು. ಈ ಬೆಳವಣಿಗೆಗಳು ಆತ್ಮಕಥೆಯ ಹುಟ್ಟು, ಬೆಳವಣಿಗೆಗಳಿಗೆ ಕಾರಣವಾದವು. ಪಾಶ್ಚಾತ್ಯರಲ್ಲಿ ಆತ್ಮಚರಿತ್ರೆ ಬರವಣಿಗೆಯ ನಂತರದ ದಿನಗಳಲ್ಲಿ ವರ್ಣರಂಜಿತ ವ್ಯಕ್ತಿತ್ವವನ್ನು ಬಿಂಬಿಸುವ ಚಾರಿತ್ರಿಕ ದಾಖಲೆಗಳಾಗಿ ಕಂಡುಬಂದವು. ಆತ್ಮಕಥಾ ರಚನೆಯು ವಿಶ್ವದ ಶ್ರೇಷ್ಠ ಮಹನೀಯರ ಜೀವನದ ಅನುಭವಗಳನ್ನು ತಿಳಿಸುವ ಸಾಹಿತ್ಯ ಪ್ರಕಾರವಾಗಿ ಇಂದು ಹೆಚ್ಚು ವ್ಯಾಪಕವಾಗಿದೆ.

"ಇತಿಹಾಸ ಒಂದು ಜನಾಂಗದ ಅಥವಾ ಸಮಾಜದ ಒಂದು ಕಾಲದ ಘಟನಾವಳಿ, ವ್ಯಕ್ತಿಯ ಹೊರವಲಯದ ವಸ್ತುವಿನ ಸತ್ಯದ ವರದಿಯಾಗಿರುತ್ತದೆ. ಆದರೆ ಆತ್ಮಚರಿತ್ರೆ ಓರ್ವ ವ್ಯಕ್ತಿಯ ಹೊರ ಒಳ ಎರಡನ್ನೂ ವಸ್ತು ಸತ್ಯ ಮತ್ತು ಮಾನಸಿಕ ಸತ್ಯಗಳ ತಳಹದಿಯ ಮೇಲೆ ರಚನೆಗೊಂಡಿರುತ್ತದೆ. ಅಲ್ಲದೆ ಹುಟ್ಟು ಸಾವುಗಳ ಎರಡು ಮಿತಿಗಳೊಳಗಿನ ವ್ಯಕ್ತಿಯ ಬದುಕನ್ನು ಚಿತ್ರಿಸುತ್ತದೆ. ಈ ಎರಡು ಗಡಿಗಳ ಮಧ್ಯದ ಪರಿಕಲ್ಪನೆಯೇ ಆತ್ಮಚರಿತ್ರೆಯಾಗುತ್ತದೆ."[೨] ಆತ್ಮಕಥೆಗಳಲ್ಲಿ ಪ್ರಾಮಾಣಿಕ ಪ್ರಯತ್ನಗಳು ಹೆಚ್ಚಾಗಿ ಕಂಡುಬರುತ್ತವೆ. ನೆನಪು, ಜ್ಞಾಪಕ, ದಿನಚರಿ, ದಿನನಿತ್ಯದ ಘಟನೆ, ಅನಿಸಿಕೆ, ಅನುಭವ, ಆಲೋಚನೆಗಳನ್ನು ತನ್ನ ಉಪಯೋಗಕ್ಕಾಗಿಯೂ ಅಥವಾ ಸಂತೋಷಕ್ಕಾಗಿಯೂ ವ್ಯಕ್ತಿ ಮಾಡಿಕೊಳ್ಳುವ ದಾಖಲೆಗಳೇ, ಆತ್ಮಕಥೆಗಳಾಗಿ ಹೊರ ಹೊಮ್ಮಿದ ಉದಾಹರಣೆಗಳು ಸಾಕಷ್ಟು ಕಾಣಬಹುದಾಗಿದೆ.

ಕನ್ನಡದಲ್ಲಿ ಆತ್ಮಕಥೆಗಳು ಹೆಚ್ಚು ಬೆಳೆದಿಲ್ಲ. ಈಗ ಬಂದಿರುವ ಜೀವನ ಚರಿತ್ರೆಗಳಲ್ಲಿ ಅರ್ಧದಷ್ಟಾದರೂ ಆತ್ಮಕಥೆಗಳು ರಚನೆಯಾಗಿರುವುದು ಕಂಡು ಬರುವುದಿಲ್ಲ. ಕನ್ನಡದ ಮಟ್ಟಿಗೆ

ಸ್ವತಂತ್ರ ಆತ್ಮಕಥೆಗಳ ರಚನೆಯಾಗಿರುವುದು ಕಡಿಮೆಯಾಗಿದ್ದೂ, ಹೆಚ್ಚಾಗಿ ಅನುವಾದ ಆಗಿರುವುದನ್ನೇ ಕಾಣಬಹುದು. ಅಂಥಹವುಗಳಲ್ಲಿ ರಾಷ್ಟ್ರನಾಯಕರು, ಅನ್ಯರಾಷ್ಟ್ರನಾಯಕರು, ಸಾಹಿತಿಗಳು, ವಿಜ್ಞಾನಗಳು, ಪ್ರಭಾವಿ ನಾಯಕರನ್ನು ಕುರಿತಾಗಿ ಬಂದಿರುವುದೇ ಹೆಚ್ಚಾಗಿ ಕಂಡುಬರುತ್ತಿವೆ."[೬] ಸ್ವತಂತ್ರ ಆತ್ಮಕಥೆಗಳಲ್ಲಿ ಐವತ್ತಕ್ಕೂ ಹೆಚ್ಚು ಜನ ಸಾಹಿತಿಗಳ ಮತ್ತು ಕಲಾವಿದರ ಜೀವನಾನುಭವಗಳನ್ನು ಒಳಗೊಂಡಿವೆ. ಉಳಿದವುಗಳು ಅನುವಾದವಾಗಿರುವ ಆತ್ಮಕಥೆಗಳಾಗಿ ಹೆಚ್ಚು ಕಂಡು ಬರುತ್ತವೆ.

ಕನ್ನಡದಲ್ಲಿ ಪ್ರಮುಖ ಆತ್ಮಕಥೆಗಳು ಇಂತಿವೆ. ಅವುಗಳಲ್ಲಿ ಕಾರಂತರ ಹುಚ್ಚು -ಮನಸ್ಸಿನ ಹತ್ತು ಮುಖಗಳು (೧೯೪೮), ದೇಜಗೌ -ಹೋರಾಟದ ಬದುಕು (೧೯೬೮), ಜಿ.ಪಿ.ರಾಜರತ್ನಂ -ಹತ್ತುವರುಷ (೧೯೩೯), ಡಿವಿಜಿ -ಜ್ಞಾಪಕ ಚಿತ್ರಶಾಲೆ (೧೯೬೭-೭೪), ಲಂಕೇಶ -ಹುಳಿಮಾವಿನಮರ (೧೯೯೭), ಸಿದ್ದಲಿಂಗಯ್ಯ -ಊರುಕೇರಿ (೧೯೯೪), ಹೆಚ್.ನವರತ್ನರಾಮರಾವ್ -ಕೆಲವು ನೆನಪುಗಳು (೧೯೬೭) ಅ.ನ.ಕೃ -ಬರಹಗಾರನ ಬದುಕು (೧೯೭೨), ನರಸಿಂಹಯ್ಯ -ಹೋರಾಟದ ಹಾದಿ (೧೯೯೫), ಅನುಪಮ ನಿರಂಜನ -ಬರಹಗಾರ್ತಿಯ ಬದುಕು (೧೯೯೦), ಗುಬ್ಬಿ ವೀರಣ್ಣ -ಕಲೆಯೇ ಕಾಯಕ (೧೯೬೭), ಜಿ.ಎಚ್.ನಾಯಕ -ಮಯೂರ, ನಾಗಲೋಟಿಮಠ -ಬಿಚ್ಚಿದ ಜೋಳಿಗೆ (೨೦೦೩), ಗೋಪಾಲಕೃಷ್ಣ ಅಡಿಗ -ನೆನಪಿನ ಗಣಿಯಿಂದ (೧೯೯೯), ಕುವೆಂಪು -ನೆನಪಿನ ದೋಣಿಯಲ್ಲಿ (೧೯೮೦), ಮಾಸ್ತಿ -ಭಾವ (೧೯೭೯), ಎ.ಎಸ್.ಮೂರ್ತಿರಾವ್ -ಸಂಜೆಗಣ್ಣಿನ ಹಿನ್ನೋಟ (೧೯೯೦), ಮುಂತಾದವುಗಳು ಕನ್ನಡದಲ್ಲಿ ಮಹತ್ವದ ಆತ್ಮಕಥೆಗಳೆನಿಸಿವೆ.

ಕಾದಂಬರಿ, ಕತೆ, ಸಣ್ಣಕತೆ, ಆತ್ಮಕಥೆ, ಪ್ರಬಂಧ, ಪ್ರವಾಸಕಥನ ಮುಂತಾದ ಸಾಹಿತ್ಯ ಪ್ರಕಾರಗಳು ಪಶ್ಚಿಮದ ಗಾಢ ಪ್ರಭಾವದಿಂದಲೇ ಬಂದವೆಂದು ಅನೇಕ ವಿದ್ವಾಂಸರು, ಸಾಹಿತಿಗಳು ಅಭಿಪ್ರಾಯ ಪಡುತ್ತಾರೆ. ಪಾಶ್ಚಾತ್ಯರ ಪ್ರಭಾವದಿಂದಾಗಿ ಕನ್ನಡದಲ್ಲಿ ಆತ್ಮಕಥಗಳು ಕಾಣಿಸಲಾರಂಭಿಸಿದವು ಮತ್ತು ನಿಖರವಾದ ಸ್ವರೂಪವನ್ನು ಕಂಡು ಕೊಂಡಿರುವುದು ಗಮನಾರ್ಹವಾಗಿದೆ. ಆಧುನಿಕ ಸಾಹಿತ್ಯದ ವಿಶಿಷ್ಟ ಪ್ರಕಾರವೆಂದೇ ಗುರುತಿಸಲ್ಪಡುವ ಆತ್ಮಕಥೆಯ ಹುಟ್ಟು ಬೆವಳಣಿಗೆಯನ್ನು ಗಮನಿಸಿದಾಗ ಪ್ರಾಚೀನ ಸಾಹಿತ್ಯದಲ್ಲಿಯೂ ಕೆಲವರು ಆತ್ಮಕಥಾಂಶವುಳ್ಳ ವಸ್ತುವನ್ನು ಗುರುತಿಸಬಹುದು. ಕಾವ್ಯಗಳಲ್ಲಿ ಆತ್ಮಕಥೆಯ ಛಾಯೆಯನ್ನು ಗುರುತಿಸಬಹುದಾಗಿದೆ. ಪ್ರಾಚೀನ ಕವಿಗಳಲ್ಲಿ ಆತ್ಮಚರಿತ್ರೆಯ ಅಂಶಗಳನ್ನು ತಿಳಿಸಿರುವ ಹಲವು ಉದಾಹರಣೆಗಳನ್ನು ಕಾಣಬಹುದು.

ಹತ್ತನೇ ಶತಮಾನದಲ್ಲಿ ಪಂಪನು ತನ್ನ ಕೃತಿಗಳಲ್ಲಿ 'ಕದಳಿಗರ್ಭಶ್ಯಾಮ, ಗುಂಗುರು ಕೂದಲಿನವನು, ಕಮಲದಂತಹ ಮುಖವುಳ್ಳವನು' ಮುಂತಾಗಿ ಸೌಂದರ್ಯ ವರ್ಣನೆ ಮಾಡಿಕೊಳ್ಳುತ್ತಾನೆ. ಈ ಅಂಶಗಳು ಪಂಪನು ತನ್ನನು ತಾನು ಪರಿಚಯ ಮಾಡಿಕೊಂಡಿದ್ದಾಗಿ ತಿಳಿದುಬರುತ್ತದೆ. ರನ್ನನು ತನ್ನ ತಂದೆ, ತಾಯಿ, ಹೆಂಡತಿಯನ್ನು ಕುರಿತು ಮತ್ತು ತನ್ನ ಕೃತಿಯನ್ನು ಪರೀಕ್ಷಿಸುವವನಿಗೆ ಎಂಟೆದೆಯಿರಬೇಕು

ಎಂದು ಹೇಳಿಕೊಳ್ಳುತ್ತಾನೆ. ಪೊನ್ನನು ಕೂಡ ತನ್ನ ಕಾವ್ಯ ರಚನಾ ಸಾಮರ್ಥ್ಯವನ್ನು "ಕಾಳಿದಾಸನಿಗಿಂತ ನೂರ್ಮಡಿ"ಯಾಗಿ ರಚಿಸುತ್ತೇನೆ" ಎಂದು ಪ್ರಶಂಸಿಸಿಕೊಳ್ಳುತ್ತಾನೆ. ಇಂತಹ ಹಲವಾರು ವೈಯಕ್ತಿಕವಾದ ಸ್ವವಿವರಗಳನ್ನು ಪ್ರಾಚೀನ ಕೃತಿಗಳಲ್ಲಿ ಕಾಣುತ್ತೇವೆ. ಆದರೂ ಈ ರೀತಿಯ ಹೆಸರುಗಳು, ಊರು, ಮತ್ತು ಆತ್ಮಪ್ರಶಂಸೆ ಮಾಡಿಕೊಳ್ಳುವ ಮಾತುಗಳೇ ಆತ್ಮಚರಿತ್ರೆಯಾಗಲಾರವು. ಈ ಕೃತಿಗಳಿಂದ ಆತ್ಮಚರಿತ್ರೆಯ ಸ್ವರೂಪದ ಸೂಕ್ಷ್ಮತೆಗಳನ್ನು ಮಾತ್ರ ಗಮನಿಸಬಹುದು. ಆತ್ಮಕಥೆಯ ಎಳೆಗಳನ್ನು ಪ್ರಾಚೀನ ಸಾಹಿತ್ಯದಿಂದಲೇ ಗುರುತಿಸಿದ ಹಲವಾರು ಸಾಹಿತಿಗಳು ಆತ್ಮಕಥೆಯ ಹುಟ್ಟು ಅದರ ಬೆಳವಣಿಗೆ ಕನ್ನಡದಿಂದಲೇ ಬೆಳೆದಿದು, ಅದು ಪಾಶ್ಚಾತ್ಯರ ಪ್ರಭಾವದಿಂದ ಜೀವಂತಿಕೆ ತುಂಬಿಕೊಂಡಿದೆ ಎಂದು ಭಾವಿಸುತ್ತಾರೆ.

ಹನ್ನೆರಡನೇ ಶತಮಾನದಲ್ಲಿ ಸಾಂಪ್ರದಾಯಿಕ ಸಾಹಿತ್ಯದ ಚೌಕಟ್ಟನ್ನು ಹೊರತುಪಡಿಸಿ ವಚನಗಳನ್ನು ರಚಿಸಿದ್ದು ತಮ್ಮಲ್ಲಿನ ಅನುಭವಗಳನ್ನು ಹೊರಹಾಕುವ ವಿಶಿಷ್ಟವಾದ ಅಭಿವ್ಯಕ್ತಿಯಾಗಿ ಕಂಡುಬಂದಿತು. ಬಹುಮುಖ್ಯವಾಗಿ ಆತ್ಮಕಥೆಯ ಮೊದಲ ರೂಪವನ್ನು ಬಸವಣ್ಣ, ಅಕ್ಕಮಹಾದೇವಿಯ ವಚನಗಳಲ್ಲಿ ಗುರುತಿಸಬಹುದಾಗಿದೆ. ಆತ್ಮಕಥೆಗಳು ಸಹ ಬರಹಗಾರನ ಮತ್ತು ಸಮಾಜದಲ್ಲಿನ ಪರಿಸರದಲ್ಲಿ ನಡೆಯುತ್ತಿರುವ ಘಟನೆಗಳನ್ನು ಕಟ್ಟಿಕೊಡುತ್ತವೆ. ಅದೇ ಮಾದರಿಯಾಗಿ ವಚನಕಾರರು ಸಮಾಜದಲ್ಲಿ ನಡೆಯುವಂತಹ ಅನಿಷ್ಟ ಮೂಢನಂಬಿಕೆ ಒಳಿತು-ಕೆಡುಕುಗಳನ್ನು ತಿಳಿಸುವ ಈ ವಚನಗಳು ಆತ್ಮಕಥೆಗಳಂತೆ ಸಮಾಜ ಮತ್ತು ವ್ಯಕ್ತಿಯಲ್ಲಿನ ಅನುಭವಗಳನ್ನೇ ತಿಳಿಸುತ್ತಾ ಹೋಗುತ್ತವೆ. ಬರಹಗಾರರಲ್ಲಿ ಆತ್ಮಪ್ರಶಂಸೆ ಮತ್ತು ತನ್ನನ್ನು ಕುರಿತು ಹೇಳಿಕೊಂಡಿರುವುದು ವಚನಗಳಲ್ಲಿ ಕಂಡುಬರುತ್ತದೆ. ಆತ್ಮಕಥೆಯ ಹುಟ್ಟು ಪಂಪನ ಕಾಲಘಟ್ಟದಲ್ಲಿ ಸೂಕ್ಷ್ಮವಾಗಿ ಅದರ ಎಳೆಗಳು ಕಂಡುಬರುತ್ತವಾದರೂ ವಚನ ಸಾಹಿತ್ಯದಲ್ಲಿ ಆತ್ಮಕಥೆಯ ನಿಖರವಾದ ಮಾಹಿತಿಗಳು ಸಿಗುತ್ತವೆ.

ಮಧ್ಯಯುಗದ ಭಕ್ತಿಕವಿಯಾಗಿದ್ದ ಹರಿಹರನ ಶತಕಗಳಲ್ಲಿ ಆತ್ಮಕಥೆಗಳ ಮಾಹಿತಿಗಳು ಸಿಗುತ್ತವೆ. ಹಂಪೆಯ ವಿರೂಪಾಕ್ಷನ ಬಗ್ಗೆ ತನ್ನಲ್ಲಿರುವ ಭಕ್ತಿಭಾವನೆ, ಸಂಸಾರ, ರಾಜಸೇವೆ ಇವೆಲ್ಲವುಗಳಿಂದಲೂ ಮುಕ್ತವಾಗಿ ಭಕ್ತಿಜೀವನ ಸಾಗಿಸಿದ ಹರಿಹರನು ತನ್ನ ಶತಕಗಳಲ್ಲಿ ಜೀವನಾನುಭವಗಳನ್ನು ವ್ಯಕ್ತಪಡಿಸಿರುವುದು ಕಾಣುತ್ತೇವೆ. ನಂತರ ಬಂದಂತಹ ರಾಘವಾಂಕ, ಜನ್ನ, ಕುಮಾರವ್ಯಾಸ, ಸರ್ವಜ್ಞ, ದಾಸ ಸಾಹಿತ್ಯದಲ್ಲಿಯು ಆತ್ಮಪ್ರಶಂಸೆ ಅಥವಾ ನಾನು ಎನ್ನುವಂತಹ ಪ್ರತ್ಯಯ ಸಿಗುತ್ತದೆ. ಕುಮಾರವ್ಯಾಸನು ತನ್ನ ಕಾವ್ಯ ತಾನು ಬರೆದುಕೊಂಡಿಲ್ಲ, ಗದುಗಿನ ವೀರನಾರಯಣ ಬರೆದನೆಂದು ಹೇಳಿಕೊಂಡಿದ್ದಾನೆ. ಸರ್ವಜ್ಞನು "ಸರ್ವಜ್ಞನೆಂಬುವನು ಗರ್ವದಿಂದಾದವನೆ, ಸರ್ವರೊಳಗೊಂದು ನುಡಿಯ ಕಲಿತು ಸಕಲ ವಿದ್ಯೆದ ಪರ್ವತವೇ ಆದ ಸರ್ವಜ್ಞ" ಎನ್ನುವಂತಹ ಈ ಸಾಲಿನಲ್ಲಿ ಸರ್ವಜ್ಞನು ತನ್ನನ್ನು ತಾನೇ ವಿಮರ್ಶಿಸಿಕೊಂಡಂತೆ ಹೇಳಿಕೊಂಡಿದ್ದಾನೆ. ಸರ್ವಜ್ಞನು ಆತ್ಮಪ್ರಶಂಸೆಯಂತೆ ಹೇಳಿಕೊಂಡಿರುವ ಮಾಹಿತಿ

ಸಿಗುತ್ತದೆ. ಆದರೂ ಸಹ ಇವುಗಳನ್ನು ಆತ್ಮಚರಿತ್ರೆಯೆಂದು ಪರಿಗಣಿಸಲು ಬಾರದು. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ರಚನೆಯಾದ ಕೃತಿ, ಕಾವ್ಯ, ವಚನ, ಕೀರ್ತನೆಗಳು ತಮ್ಮದೇ ಆದ ವಿಶಿಷ್ಟತೆ ಪಡೆದು ಸೃಷ್ಟಿಗೊಂಡಿವೆ. ಹಾಗಾಗಿಯೇ ಆತ್ಮಕಥೆಯ ಎಳೆಗಳನ್ನು ಗುರುತಿಸಬಹುದೇ ವಿನಃ ಆತ್ಮಕಥೆಯೆಂದೇ ನಿರ್ಧರಿಸವುದು ಸಮಂಜಸವಲ್ಲ.

ಪ್ರಾಚೀನ ಕವಿಗಳಲ್ಲಿ ತಮ್ಮ ಅನುಭವಗಳನ್ನು ಅಭಿವ್ಯಕ್ತಿಸುವಂತಹ ಇಚ್ಛೆಯಿದ್ದರೂ ಅದನ್ನು ಮರೆಮಾಚಿಕೊಂಡಿರುವುದು ಕಾಣುತ್ತೇವೆ. ಬಹುತೇಕ ಕವಿಗಳು ತಮ್ಮ ಕೃತಿಗಳಲ್ಲಿ ಪರೋಕ್ಷವಾಗಿಯೇ ತಮ್ಮ ವ್ಯಕ್ತಿತ್ವವನ್ನು ನಿರೂಪಿಸಿಕೊಂಡಿದ್ದಾರೆ. ಆದರೂ ನೇರವಾಗಿ ತಮ್ಮ ಜೀವನ ಕಥೆಯನ್ನು ಬರೆದುಕೊಳ್ಳುವುದಕ್ಕಿಂತ ರಾಜ ಮಹಾರಾಜರ, ದೇವರುಗಳ, ಮತಧರ್ಮಗಳ ಬಗೆಗಿನ ಆಸಕ್ತಿಯೇ ಕವಿಗಳ ಕೃತಿಗಳಲ್ಲಿ ಹೆಚ್ಚು ಕಂಡುಬರುತ್ತದೆ. ಹಾಗಾಗಿಯೇ ಮತಧರ್ಮ ಮತ್ತು ಪುರಾಣ ಕೃತಿಗಳ ಬಗೆಗಿನ ಸಾಹಿತ್ಯವೇ ಹೇರಳವಾಗಿ ರಚನೆಗೊಂಡಿದೆ. ಅಲೂರು ವೆಂಕಟರಾಯರು ತಮ್ಮ ಆತ್ಮಕಥೆಯನ್ನು ಬರೆಯುವಾಗ ಈ ರೀತಿ ಹೇಳಿರುತ್ತಾರೆ. "ತನ್ನ ಜೀವನ ಚರಿತ್ರೆಯನ್ನು ತಾನೇ ಬರೆಯವುದು ಸನಾತನ ಸಂಪ್ರದಾಯವಲ್ಲ. ತಮ್ಮ ಸ್ತುತಿಯನ್ನು ಅನ್ಯರು ಮಾಡುವುದನ್ನು ಕೂಡಾ ಯಾರು ಶೂಲದಂತೆ ತಿಳಿಯುತ್ತಿದ್ದರೋ ಅವರು ತಮ್ಮ ಸ್ತುತಿಯನ್ನು ತಾವೇ ಮಾಡಿಕೊಳ್ಳುವರೇ? ಆದರೆ ಪಾಶ್ಚಾತ್ಯರು ಆತ್ಮಚರಿತ್ರೆ ಬರೆಯುವುದೊಂದು ಶಾಸ್ತ್ರವನ್ನೇ ನಿರ್ಮಿಸಿಕೊಂಡಿದ್ದಾರೆ."[4] ಎಂದು ಹೇಳಿದ್ದಾರೆ. ಅಲೂರರ ಅಭಿಪ್ರಾಯವು ಹಿಂದಿನ ಕವಿಗಳಲ್ಲಿಯೂ ಆತ್ಮಚರಿತ್ರೆಯನ್ನು ಬರೆಯುವಲ್ಲಿ ವಿಫಲವಾಗಿರುವುದಕ್ಕೆ ಕಾರಣವಾಗಿರಬೇಕು. ಆತ್ಮಕಥೆಯನ್ನು ಗುರುತಿಸುವಂತಹ "ಆತ್ಮಪ್ರಶಂಸೆ", 'ನಾನು' ಎಂಬ ಪದಗಳು ವ್ಯಕ್ತಿತ್ವದ ಮಾಹಿತಿ, ಜೀವನಾನುಭವದ ಎಳೆಗಳನ್ನು ಪ್ರಾಚೀನ ಕೃತಿಗಳಲ್ಲಿ ನೋಡುತ್ತೇವೆ. ಇಂತಹ ಪದಗಳ ಎಳೆಗಳನ್ನಿಟ್ಟುಕೊಂಡು ಆತ್ಮಕಥೆ ಎನ್ನುವುದಾದರೆ, ಆತ್ಮಕಥೆಯ ಹುಟ್ಟನ್ನು ಶಾಸನಗಳಲ್ಲಿಯೂ ಕಾಣಬಹುದಾಗಿದೆ.

ಕನ್ನಡದ ಪ್ರಾಚೀನ ಶಾಸನಗಳಾದ ಹಲ್ಮಿಡಿ ಶಾಸನ, ಗಂಗಾಧರಂ ಶಾಸನ, ಆತಕೂರು ಶಾಸನ, ಮಸ್ಕಿ ಶಾಸನ, ಐಹೊಳೆ ಶಾಸನಗಳಲ್ಲಿ ಆತ್ಮಕಥಾಂಶಗಳುಳ್ಳ ಮಾಹಿತಿಗಳು ದೊರೆಯುತ್ತವೆ. ಹಲ್ಮಿಡಿಯಲ್ಲಿ ಆನ್ ಪ್ರಾದೇಶಿಕವಾದ ಮಾಹಿತಿಗಳು ದೊರೆಯುತ್ತವೆ. ಗಂಗಾಧರ ಶಾಸನ ಪಂಪನ ತಮ್ಮನಾದ ಗಂಗಾಧರನು ಕೆತ್ತಿಸಿದ್ದು ಈ ಶಾಸನದಲ್ಲಿ ಕೌಟುಂಬಿಕ ವಿವರಗಳನ್ನು ಮತ್ತು ಪಂಪನ ಬಗ್ಗೆ ಮಾಹಿತಿಗಳನ್ನು ನೀಡಲಾಗಿದೆ. ಮಸ್ಕಿ ಶಾಸನದಲ್ಲಿ "ಚಪಡೇನಾ ಲಿಖಿತ ಲಿಪಿಕಾರೇನಾ" ಎಂಬ ಸಾಲು ಇದ್ದು ಚಪಡ ನೆಂಬುವನು ಈ ಶಾಸನದ ಲಿಪಿಕಾರವೆಂಬುದಾಗಿದ್ದು, ಆತ್ಮ ಪ್ರಶಂಸೆಯಿಂದ ಹೇಳಿಕೊಂಡಂತಹ ಅಂಶವುಳ್ಳದ್ದಾಗಿದೆ. ಆತಕೂರು ಶಾಸನದಲ್ಲಿ ರವಿ ಎನ್ನುವನು ತನ್ನ ಮಗಳ ಬಗ್ಗೆ ಪ್ರಶಂಸಿಸುವುದರ ಜೊತೆಗೆ ತನ್ನನು ತಾನು ಪ್ರಶಂಸಿಸಿಕೊಂಡಿರುವ ದಾಖಲೆ ಕಂಡುಬಂದಿದೆ. ಇಂತಹ ಎಲ್ಲಾ ಮಾಹಿತಿಗಳಿಂದ ಆತ್ಮಕಥೆಯ ಸೂಕ್ಷ್ಮ ತರಹದ ಪದಬಳಕೆಯು ಶಾಸನಗಳಲ್ಲಿ ವ್ಯಕ್ತಗೊಂಡಿರುವುದು ಸ್ಪಷ್ಟ ನಿದರ್ಶನವಾಗಿದೆ.

‘ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ’ ಎಂಬ ಪಾಶ್ಚಾತ್ಯರ ಈ ಕುಹಕಿನಿಂದಾಗಿ ಭಾರತೀಯರಲ್ಲಿ ರಾಜರು, ವಿದ್ವಾಂಸರು ಶ್ರೇಷ್ಠನಾಯಕರು ಜೀವನ ಚರಿತ್ರೆಯನ್ನು ಕಟ್ಟುವಲ್ಲಿ ಮುಂದಾದರು. ಇದರ ಫಲವಾಗಿ ‘ಬಾಬರ್‌ನಾಮಾ’, ‘ಅಕಬರ್‌ನಾಮಾ’, ‘ಹೈದರ್‌ನಾಮಾ’ ಮುಂತಾದವು ರಾಷ್ಟ್ರಮಟ್ಟದಲ್ಲಿ ಉರ್ದು ಭಾಷೆಯಲ್ಲಿ ಜೀವನಚರಿತ್ರೆ ಮತ್ತು ಆತ್ಮಕಥೆಗಳು ಹುಟ್ಟಿಕೊಂಡವು. ಕನ್ನಡದಲ್ಲಿ ಟಿಪ್ಪುಸುಲ್ತಾನ್‌ನು ದಿನಚರಿ ಬರೆಯುತ್ತಿದ್ದು ವಿಶೇಷವಾಗಿತ್ತು. ಈ ದಿನಚರಿಯೇ ಅವರ ಜೀವನದ ಮೇಲೆ ಬೆಳಕು ನೀಡಿ ದಾಖಲಾಗಿದ್ದು ಕಂಡುಬರುತ್ತದೆ.

ಕನ್ನಡ ಸಾಹಿತ್ಯದ ಬೆಳವಣಿಗೆ ಹಲವು ಶತಮಾನಗಳಿಂದ ಕಂಡುಬಂದಿದ್ದರೂ, ಆತ್ಮಕಥಾ ಪ್ರಕಾರವು ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದಾಗಿಯೇ ಕನ್ನಡದಲ್ಲಿ ನೆಲೆಯೂರಿರುವುದನ್ನು ಸ್ಪಷ್ಟಪಡಿಸಿದೆ. ಕನ್ನಡದಲ್ಲಿ ಹತ್ತೊಂಭತ್ತನೆಯ ಶತಮಾನದ ಮಧ್ಯದವರೆಗೂ ಆತ್ಮಕಥೆ ಪ್ರಕಾರಗಳು ಬಂದಿರುವುದಿಲ್ಲ. ಮೊಟ್ಟಮೊದಲು ಸ್ವತಂತ್ರ ಆತ್ಮಚರಿತ್ರೆ ಬರೆದದ್ದು ಹರ್ಡೇಕರ್ ಮಂಜಪ್ಪನವರು. ೧೯೩೬ರಲ್ಲಿ ನನ್ನ “ಮೂವತ್ತು ವರ್ಷಗಳ ಕಾಣಿಕೆ” ಎಂಬುದು ಅವರ ಸಂಕ್ಷಿಪ್ತ ಪೂರ್ವವೃತ್ತಾಂತ ಹಾಗೂ ಅವರ ಸಾರ್ವಜನಿಕ ಜೀವನದ ನಿರೂಪಣೆಯನ್ನು ತಿಳಿಸುವ ಆತ್ಮಕಥೆಯಾಗಿದೆ. ನಂತರದ ಆತ್ಮಕಥೆಯೆಂದರೆ ೧೯೪೯ರಲ್ಲಿ ಪ್ರಕಟವಾದ ಜಿ.ಪಿ.ರಾಜರತ್ನಂರವರ “ಹತ್ತು ವರುಷ” ಇವುಗಳು ಕನ್ನಡಕ್ಕೆ ಮೊದಲು ಪರಿಚಯಿಸಲ್ಪಡುವ ಆತ್ಮಕಥೆಗಳಾಗಿವೆ.

ಆತ್ಮಕಥೆಯು ವಿಶಿಷ್ಟ ಪ್ರಕಾರವಾಗಿ ಕಂಡುಬಂದಿದ್ದು ಅನೇಕ ಹಿರಿಯ ತಲೆಮಾರಿನ ಸಾತಿಹಿಗಳು ತಮ್ಮ ಜೀವನದ ಅನುಭವಗಳನ್ನು ದಾಖಲುಮಾಡಿಕೊಳ್ಳುವ, ಮುಂದಿನವರಿಗೆ ತಿಳಿಸುವ, ಸ್ನೇಹಿತರ ಒತ್ತಾಯದಿಂದಲೋ ಆತ್ಮಕಥೆಯನ್ನು ಬರೆದದ್ದು ತಿಳಿದುಬರುತ್ತದೆ. ಶ್ರೀಮಂತ ವ್ಯಕ್ತಿಯೊಬ್ಬನ ಜೀವನ ವೃತ್ತಾಂತ ಬರೆದಾಗ ಮತ್ತು ರಾಷ್ಟ್ರನಾಯಕನ ಬಗ್ಗೆ ಬಂದಂತಹ ಪುಸ್ತಕಗಳೇ ಹೆಚ್ಚು ಮನ್ನಣೆ ಪಡೆದುಕೊಂಡವು. ಮೊದಮೊದಲಿಗೆ ಆತ್ಮಕಥೆಗಳು ಹಿರಿಯತಲೆಮಾರಿನ ಸಾಹಿತಿಗಳು, ಶ್ರೀಮಂತ ವಿದ್ವಾಂಸರು, ಶ್ರೇಷ್ಠನಾಯಕರ ಜೀವನ ವಿಧಾನವನ್ನು ದಾಖಲು ಮಾಡುವ ಪ್ರಕಾರವಾಗಿತ್ತು. ಒಂದರ್ಥದಲ್ಲಿ ಆತ್ಮಕಥೆ ಎಂಬುದು ಇಳಿವಯಸ್ಸಿನಲ್ಲಿ ಬರೆಯುವಂತಹ ಸಾಹಿತ್ಯ ಪ್ರಕಾರವಾಗಿ ಹೆಸರು ಪಡೆದಿತ್ತು. ಕಾಲಾಂತರದಲ್ಲಿ ಆತ್ಮಕಥೆ ಸಾಹಿತ್ಯವು ಸಾರ್ವತ್ರಿಕ ಸಾಹಿತ್ಯವೆಂಬಂತೆ ಗೋಚರವಾಯಿತು. ರಾಜಕಾರಣಿಗಳು, ಶಿಕ್ಷಕರು, ಮಠಾಧೀಶರುಗಳು, ರೋಗಿಗಳು, ಉನ್ನತ ಅಧಿಕಾರಿಗಳು, ಹೋರಾಟಗಾರರು ಮುಂತಾದ ರಂಗಗಳಲ್ಲಿ ತಮ್ಮದೇ ವಿಶಿಷ್ಟ ವ್ಯಕ್ತಿತ್ವ ಹೊಂದಿದಂತವರು ಆತ್ಮಕಥೆ ರಚನೆಯಲ್ಲಿ ತೊಡಗಿಕೊಂಡು ಯಶಸ್ಸನ್ನು ಪಡೆದಿದ್ದಾರೆ.

“ಕನ್ನಡದ ಮಟ್ಟಿಗೆ ಆಧುನಿಕ ಸಾಹಿತ್ಯದಲ್ಲಿ ಒಂದು ಪ್ರಕಾರವಾಗಿ ಆತ್ಮಕಥೆ ಬೆಳೆದಿದ್ದು ಪಶ್ಚಿಮದ ಸಹವಾಸದಿಂದಲೇ. ಆತ್ಮಕಥೆಗಳು ಆಧುನಿಕತೆಯ ವಿಶಿಷ್ಟವಾದ ಭಾಗವಾಗಿ ಬೆಳೆದಿವೆ. ಆದರೆ ಅದನ್ನು

ನಮ್ಮ ಸಾಹಿತ್ಯ ಸಂಸ್ಕೃತಿಯ ವಿಚಿತ್ರ ಧೋರಣೆಯಿಂದ ಗಂಭೀರ ಚರ್ಚೆಗೆ ಒಳಪಡಿಸಲು ಸಾಧ್ಯವಾಗಿಲ್ಲ. ನಾವು ಗೋಕಾಕ್‌ರ 'ಭಾರತ ಸಿಂಧುರಶ್ಮಿ'ಯನ್ನು ಚರ್ಚಿಸಬಲ್ಲೆವು. ಆದರೆ ಕನ್ನಡದ ಶ್ರೇಷ್ಠ ಆತ್ಮಕಥೆಗಳನ್ನಲ್ಲ. ಕಾರಂತರ 'ಮೂಕಜ್ಜಿಯ ಕನಸುಗಳು' ಕಾದಂಬರಿಯಾಗಿರುವ ಕಾರಣಕ್ಕೆ 'ಹುಚ್ಚು ಮನಸ್ಸಿನ ಹುಚ್ಚುಮುಖ"ಗಳಿಗಿಂತ ಮುಖ್ಯವಾಗುತ್ತದೆ. ಪ್ರಾಚೀನ ಸಾಹಿತ್ಯದಲ್ಲಿಲ್ಲದ ಒಂದು ಬಗೆಯ ಶ್ರೇಣೀಕರಣ ಆಧುನಿಕ ಸಾಹಿತ್ಯದಲ್ಲಿ ಇದ್ದಂತಿದೆ."[5] ಇಂತಹ ತಾರತಮ್ಯಗಳು ಸಾಹಿತ್ಯದಲ್ಲಿ ಆತ್ಮಕಥೆಯ ಸೃಜನಶೀಲತೆಯನ್ನು ಪ್ರಶ್ನಿಸುವಂತಾಗಿವೆ. ಆತ್ಮಕಥೆಯನ್ನು ಸೃಜನಶೀಲಸಾಹಿತ್ಯ ಎಂಬುದಾಗಿ ಒಪ್ಪಿಕೊಳ್ಳುವುದು ಸಾಹಿತಿಗಳಿಗೆ, ಚಿಂತಕರಿಗೆ ಸಾಧ್ಯವಾಗಿಲ್ಲ. ಸಾಹಿತ್ಯ-ಸಾಹಿತ್ಯೇತರ, ಕಾವ್ಯ-ಗದ್ಯ, ಸೃಜನ-ಸೃಜನೇತರ ಈ ತರಹದ ವಿಭಾಗಗಳಿಂದಾಗಿ ಆತ್ಮಕಥೆಗೆ ಸಿಗುವಂತಹ ಮನ್ನಣೆಗೆ ಹಿನ್ನಡೆಯಾಗಿದೆ. ಆತ್ಮಕಥೆಯು ಅನುಭವಗಳನ್ನು ನಿರೂಪಣೆ ಮಾಡುತ್ತವೆ ಹೊರತು, ಸಾಹಿತ್ಯದ ಇತರ ಪ್ರಕಾರಗಳಾದಂತಹ ಕಥೆ, ಕಾದಂಬರಿ, ಕಾವ್ಯಗಳಂತೆ ಸೂಕ್ಷ್ಮವಾದ ಬರವಣಿಗೆ ಆತ್ಮಕಥೆಗಳಲ್ಲಿ ಕಂಡುಬರುವುದಿಲ್ಲ. ಇಂತಹ ಕಾರಣಗಳಿಂದಲೇ ಏನೋ ಯು.ಆರ್.ಅನಂತಮೂರ್ತಿಯವರು ಆತ್ಮಕಥೆ ಬರೆಯುವುದಿಲ್ಲ ಎಂಬುದಾಗಿ ಹೇಳಿಕೊಂಡಿದ್ದು ತಿಳಿಯಬಹುದಾಗಿದೆ. ಸಾಹಿತ್ಯದ ರಚನೆಯ ಕೌಶಲ್ಯವು ಆತ್ಮಕಥೆಗಳಲ್ಲಿ ಕಾಣುವುದಿಲ್ಲ, ಹೀಗಾಗಿಯೇ ಸಾಹಿತ್ಯದ ಜೊತೆಗಿನ ಸಮಾನತೆಯನ್ನು ಎದುರು ನೋಡುವಂತಾಗಿದೆ.

ಆತ್ಮಕಥೆಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ನೋಡಬಹುದಾಗಿದೆ. ಒಂದು: ಬೇರೆ ಭಾಷೆಯಲ್ಲಿ ಬಂದಿರುವ ಗಾಂಧಿ, ಗಾರ್ಕಿ, ಟಾಗೂರ್, ಟಾಲ್‌ಸ್ಟಾಯ್, ಸಲಿಂ ಅಲಿ, ಲೋಹಿಯಾ, ಅಂಬೇಡ್ಕರ್ ಅವರಂತಹವರನ್ನು ಕುರಿತ ಆತ್ಮಕಥೆಗಳು ಕನ್ನಡಕ್ಕೆ ಅನುವಾದಗೊಂಡಿರುವುದು. ಇಂತಹ ಅನುವಾದಿತ ಆತ್ಮಕಥೆಗಳನ್ನು ಕನ್ನಡದ್ದೇ ಎಂದು ಪರಿಭಾವಿಸುವುದಾಗಿದೆ. ಎರಡು: ಆತ್ಮಕಥೆಗಳನ್ನು ಕೃತಿ ರೂಪದಲ್ಲಿಯೇ ಗಮನಿಸಬೇಕಾಗಿಲ್ಲ, ಅವು ಬಿಡಿ ಲೇಖನವಾಗಿಯೂ ಇರಬಹುದು. ಸಾರಾ ಅವರ ಮುಸ್ಲಿಂ ಹುಡುಗಿ ಶಾಲೆ ಕಲೆತಿದ್ದು, ಡಿ.ವಿ.ಜಿ -ಜ್ಞಾಪಕ ಚಿತ್ರಶಾಲೆ, ಕಾರಂತರ -ಹಳ್ಳಿಯ ಹತ್ತು ಸಮಸ್ತರು ಇವುಗಳು ಕನ್ನಡದ ಶ್ರೇಷ್ಠ ಜೀವನ ಕಥಾನಕವಾಗಿ ರೂಪುಗೊಂಡಿವೆ. ಇದಲ್ಲದೆ ಲೇಖಕರ ಬಗ್ಗೆ ಮಕ್ಕಳು, ಹೆಂಡತಿಯರು ಮತ್ತು ಆಪ್ತರು ಬರೆದ ಬರಹಗಳೂ ಸಹ ಕನ್ನಡದ ಆತ್ಮಕಥೆಗಳಲ್ಲಿ ಕಾಣಬಹುದಾಗಿದೆ.

"ಕನ್ನಡದ ಆತ್ಮಕಥೆ ಮತ್ತು ಜೀವನ ಚರಿತ್ರೆ ಬೇರೆ ಬೇರೆ ಪ್ರಕಾರಗಳಲ್ಲಿ ರೂಪಾಂತರಗೊಂಡು ಪ್ರಕಟಗೊಳ್ಳುತ್ತಿವೆ. ಅದರಲ್ಲೂ ಆತ್ಮಕಥೆಗೂ ಕಾದಂಬರಿ ಪ್ರಕಾರಕ್ಕೂ ಒಳಸಂಬಂಧವಿರುವುದನ್ನು ಕಾಣುತ್ತವೆ. ಕಾದಂಬರಿ ಕ್ಷೇತ್ರವು ತುಂಬಾ ಜನಪ್ರಿಯವಾದ ಸಾಹಿತ್ಯ ಪ್ರಕಾರವಾಗಿದೆ. ಆತ್ಮಕಥೆಯ ಗದ್ಯದ ನಿರೂಪಣೆಯು ಕಾದಂಬರಿಗೆ ಸಮೀಪವಾದ ಪ್ರಕಾರವಾಗಿದ್ದು, ಆತ್ಮಕಥೆಯು ತನ್ನದೇ ಆದ ಓದುಗರನ್ನು ಕಟ್ಟಿಕೊಂಡಿದೆ. ಕನ್ನಡದಲ್ಲಿ ಆತ್ಮಕಥನ ಬರೆಯುವ ಮಾದರಿಯು ಕಾದಂಬರಿಗಳಿಗೆ

ಅನ್ವಯಿಸಿ ಬರೆಯುವ ಪದ್ಧತಿಯು ಬೆಳೆದುಕೊಂಡು ಬಂದಿದೆ. ಅಂತಹ ಕಾದಂಬರಿಗಳಲ್ಲಿ ಪ್ರಮುಖವಾಗಿ ತೇಜಸ್ವಿಯವರ '-ಕರ್ವಾಲೋ' ಮತ್ತು ಕಾರಂತರ 'ಅಳಿದ ಮೇಲೆ' ಕಾದಂಬರಿಗಳು. ಇವುಗಳಲ್ಲಿ ಆತ್ಮಕಥೆಗಳ ನಿರೂಪಣೆಯಂತೆ ಕಂಡುಬರುವ 'ನಾನು' ಎಂಬ ಪದವು ಈ ಕಾದಂಬರಿ ವಿಶಿಷ್ಟತೆಯಾಗಿದೆ. ಕೇವಲ ಇಂತಹ ಎಳೆಗಳನ್ನು ಆಧಾರಿಸಿ ಆತ್ಮಕಥೆಯ ನಂಟು ಕಟ್ಟುವುದು ಸುಲಭವಲ್ಲ. ಕಾದಂಬರಿಗಳಲ್ಲಿ ಪಾತ್ರಗಳ ಜೀವಂತಿಕೆ ಹಿಡಿಯುವ ಸಲುವಾಗಿ 'ನಾನು' ಎಂಬ ಪದಗಳನ್ನು ಬಳಸಿರುವ ಸಾಧ್ಯತೆಯಿದೆ.

ಆತ್ಮಕಥೆ ಮತ್ತು ಜೀವನ ಚರಿತ್ರೆಯು ಒಂದೇ ದಾರಿಯಲ್ಲಿ ಸಾಗಿದ್ದರೂ ಅದರಲ್ಲಿನ ಭಿನ್ನಾಭಿಪ್ರಾಯಗಳು ಅವುಗಳನ್ನು ಬೇರ್ಪಡಿಸುತ್ತವೆ. ಆತ್ಮಕಥೆಯಲ್ಲಿ ನಾನು ಎಂಬ ಆತ್ಮಪ್ರಶಂಸೆಯ ಜೊತೆಗೆ ವಿಮರ್ಶಿಸಿಕೊಳ್ಳುವ ತನ್ನತನದ ನೈಜ್ಯತೆಯ ಘಟನೆಗಳನ್ನು ಹಿಡಿದಿಡಬಹುದು. ಆತ್ಮಕಥೆಗಳಲ್ಲಿ ತನ್ನನ್ನು ಕುರಿತು ಪ್ರಶಂಸಿಕೊಳ್ಳುತ್ತಾನೆ. ಜೀವನ ಚರಿತ್ರೆಯಲ್ಲಿ ಅನೇಕ ಜೀವನದ ವಿಧಾನವನ್ನು ಬರೆಯುವ 'ಅವರು' ಎಂಬ ಪದದಿಂದಲೇ ನಿರೂಪಿಸುತ್ತಾರೆ. ಬರಹಗಾರನು ವಿವಿಧ ದಾಖಲೆಗಳನ್ನು ಅನ್ವಯಿಸಿಕೊಂಡು ಬರೆದಿರುತ್ತಾನೆ ವಿನಃ ಲೇಖಕನ ಅಂತರಂಗದ ಅನುಭವವನ್ನು ಅನುಭವಿಸಲು ಸಾಧ್ಯವಾಗುವುದಿಲ್ಲ. ಬರಹಗಾರನು ಅನ್ಯರನ್ನು ಹೊಗಳುವ ಜೊತೆಗೆ ತನ್ನನ್ನು ಕುರಿತು ವರ್ಣಿಸಿಕೊಳ್ಳುವ ಅವಕಾಶ ಹೆಚ್ಚಾಗಿರುತ್ತದೆ. ಇಂತಹ ಹಲವಾರು ಅಂಶಗಳಿಂದ ಜೀವನ ಚರಿತ್ರೆ ಮತ್ತು ಆತ್ಮಕಥೆ ಪ್ರಕಾರಗಳು ಭಿನ್ನವಾಗಿ ನಿಲ್ಲುತ್ತವೆ.

ಆತ್ಮಕಥೆಗಳು ಸಾಮಾನ್ಯವಾಗಿ ಓದುಗರನ್ನು ಹೆಚ್ಚು ಆಪ್ತವಾಗಿಸುತ್ತವೆ. ಅದರಲ್ಲೂ ಶ್ರೀಮಂತರ, ಶ್ರೇಷ್ಠನಾಯಕರ, ಸಾಹಿತಿಗಳ ಜೀವನಾನುಭವಗಳು ಆತ್ಮಕಥೆಯಾದರೆ ಅವಕ್ಕೆ ಹೆಚ್ಚಿನ ಮನ್ನಣೆಸಿಗುತ್ತದೆ. ಆತ್ಮಕಥೆಗಳು ಕನ್ನಡಕ್ಕೆ ಬಂದ ಪ್ರಾರಂಭದಲ್ಲಿ ಶ್ರೇಷ್ಠರ ಜೀವನವನ್ನು ಓದುವ ಸಾಹಿತ್ಯ ಪ್ರಕಾರವಾಗಿತ್ತು. ಆತ್ಮಕಥನಕಾರರು ತಮ್ಮ ಜೀವನಾನುಭವಗಳನ್ನು ಇಳಿವಯಸ್ಸಿನಲ್ಲಿ ದಾಖಲು ಮಾಡುವುದು ಹೆಚ್ಚಾಗಿ ಕಂಡುಬಂದಿದೆ. ಹುಟ್ಟು-ಸಾವುಗಳ ಮಧ್ಯದ ಅನುಭವದ ಘಟನೆಗಳನ್ನು ತಮ್ಮ ಸುತ್ತಮುತ್ತಲಿನ ಪರಿಸರದ ಚೌಕಟ್ಟಿನೊಳಗೆ ಬರೆದಿರುವುದು ಗಮನಿಸಬಹುದು. ಈ ತರಹದ ನೆನಪಿನ ಊಹೆಗಳಿಂದಲೇ ಬರೆಯುವಲ್ಲಿ ನೈಜ ಘಟನೆಗಳನ್ನು ಪ್ರಾಮಾಣಿಕವಾಗಿ ದಾಖಲು ಮಾಡುವಲ್ಲಿ ಸತ್ಯಾಸತ್ಯತೆಯನ್ನು ಪ್ರಶ್ನಿಸುವಂತಾಗುತ್ತದೆ. ಶ್ರೀರಂಗರು ಕಲ್ಪನಾ ಶಕ್ತಿ ಕುರಿತು ಈ ರೀತಿ ಹೇಳಿದ್ದಾರೆ. ಆತ್ಮಕಥೆಯನ್ನು ಬರೆಯುವಾಗ ಕಲ್ಪನಾ ಶಕ್ತಿಯನ್ನು ಪೂರ್ತಿಯಾಗಿ ಬದಿಗಿಟ್ಟಿದ್ದೇನೆಂದು ಹೇಳಲಾರೆ. ಆದರೆ ಸಾಹಿತ್ಯದಲ್ಲಿ ಕಲ್ಪನೆ ಸಾಧನತ್ವ ಅನೇಕ ಮುಖವಾಗಿದೆ, ವಸ್ತುವನ್ನು ನಿರ್ಮಿಸುವುದಕ್ಕೂ ಕಲ್ಪನೆ ಅಗತ್ಯವಿದ್ದಂತೆ, ಅದನ್ನು ಪ್ರತಿಪಾದಿಸುವ ಶೈಲಿಯನ್ನು ಕಂಡುಕೊಳ್ಳವ ಅಗತ್ಯವಿದೆ. ಅದನ್ನು ಸಂಪೂರ್ಣ ವಾಸ್ತವವಾಗಿ ನಡೆದುದರ ಕಥೆ ಎಂದು ಹೇಳಲಾಗದು ಎಂದು ತಿಳಿಸಿದ್ದಾರೆ. ಲೇಖಕನ ಗೌರವಕ್ಕೆ ದಕ್ಕೆ ಉಂಟಾಗುವ ವಿಚಾರಗಳನ್ನು ಕೈಬಿಟ್ಟು ಬರೆದಿರುವುದನ್ನು ಕಾಣುತ್ತೇವೆ. ತನ್ನನ್ನು ತಾನು ಹೊಗಳಿಕೊಂಡು ಬರೆಯುವುದು ಆತ್ಮಕಥೆಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿವೆ.

ಶಿವರಾಮ ಕಾರಂತರ ಆತ್ಮಕಥೆಯನ್ನು ಬರೆಯುವಾಗ ತಮ್ಮ ಪ್ರಾಮಾಣಿಕತೆಯನ್ನು ಈ ರೀತಿಯಾಗಿ ಹೇಳಿಕೊಂಡಿದ್ದಾರೆ. "ಎಲ್ಲಾ ಸಂದರ್ಭಗಳು ನನ್ನ ಹೃದಯಕ್ಕೆ ತಾಗಿದ ಗೊಂದಲ, ನೋವು ಕಸಿವಿಸಿಯನ್ನುಂಟು ಮಾಡಿದ ನೈಜ ಘಟನೆಗಳು ನನಗೆ ಕಾಣದ, ಕಂಡರೂ ಹೇಳಲು ಯೋಗ್ಯವಲ್ಲದಂತಹ ವಿಷಯಗಳು ಬಹಳಷ್ಟು ಇರಬಹುದು. ಆದರೆ ಇಲ್ಲಿ ನನಗೆ ನಾನೇ ಒಂದು ಚೌಕಟ್ಟು ಹಾಕಿಕೊಂಡು ಬರೆದಿದ್ದೇನೆ. ಪ್ರಾಮಾಣಿಕ ಅನಿಸಿಕೆಯ ಜೊತೆಗೆ ವ್ಯಕ್ತಿ ದೌರ್ಬಲ್ಯಗಳನ್ನು ಅನುಕಂಪದಿಂದ ದಾಖಲಿಸಿದ್ದೇನೆ" ಎಂದಿದ್ದಾರೆ.

ಆತ್ಮಕಥೆಯನ್ನು ಬರಹಗಾರನು ತನ್ನ ಸ್ವಹಿತಾಸಕ್ತಿಯಿಂದ ಬರೆದುಕೊಳ್ಳದೆ ಸ್ನೇಹಿತರ, ಬಂಧುಗಳ ಒತ್ತಡಕ್ಕೆ ಮಣಿದು ಆತ್ಮಕಥಾ ರಚನೆಗೆ ತೊಡಗುವಂತಹ ಸಾಹಿತಿಗಳು ಇದ್ದಾರೆ. ಅಂತಹವರಲ್ಲಿ ಕಾರಂತರು, ಹೆಚ್.ನರಸಿಂಹಯ್ಯ, ಆರ್.ಸಿ.ಹಿರೇಮಠ, ನವರತ್ನರಾಮರಾವ್ ಅವರಂತಹ ಪ್ರಮುಖರು ಆತ್ಮಕಥೆ ಬರೆದಿದ್ದು ಅನ್ಯರ ಒತ್ತಡದಿಂದಾಗಿ ಎಂದು ಹೇಳಿಕೊಂಡಿದ್ದಾರೆ. ಕೆಲವು ಸಾಹಿತಿಗಳು ಆತ್ಮಕಥೆ ಬರೆಯುವಲ್ಲಿ ನಿರಾಸಕ್ತಿತೋರಿದ್ದರು. ಕಾರಂತರ ಸ್ನೇಹಿತರ ಒತ್ತಡವನ್ನು "ನೀವು ನನ್ನನ್ನು ಕೊಲ್ಲಬೇಕಿಲ್ಲ! ಎನ್ನ ಆತ್ಮಹತ್ಯೆಯನ್ನು ನಾನೇ ಮಾಡಿಕೊಳ್ಳುತ್ತೇನೆ" ಎಂದು ಹೇಳಿಕೊಂಡಿದ್ದರು.

ಬರಹಗಾರರು ತಮ್ಮ ಆತ್ಮಕಥೆಯಲ್ಲಿ ಜೀವನದ ವಿವರಗಳನ್ನು ಹುಟ್ಟಿನಿಂದ ಸಾವಿನವರೆಗೂ ಹೇಳಿಕೊಂಡಿದ್ದಾರೆ. ಕೆಲವರು ಕೆಲವೇ ವಿಷಯಗಳಿಗೆ ತಮ್ಮ ನೆನಪುಗಳನ್ನು ಸೀಮಿತಗೊಳಿಸಿಕೊಂಡಿರುತ್ತಾರೆ. ವೈಯಕ್ತಿಕವಾದ ಬದುಕನ್ನು ದೂರವಾಗಿರಿಸಿ ವೃತ್ತಿ ಬದುಕಿನ ಘಟನೆಗಳನ್ನು ದಾಖಲಿಸಿ ಶ್ರೇಷ್ಠ ಆತ್ಮಕಥಾ ನಿರೂಪಕರಾಗಿ ಯಶಸ್ವಿಯಾಗಿದ್ದಾರೆ. ಅಂತಹವರಲ್ಲಿ ಪ್ರಧಾನವಾಗಿ ನವರತ್ನ ರಾಮರಾಯರ "ಕೆಲವು ನೆನಪುಗಳು", ರಾಜರತ್ನಂ ರವರ "ಹತ್ತು ವರುಷಗಳು", ನಾಗಲೋಟಿಮಠರವರ "ಬಿಚ್ಚಿದ ಜೋಳಿಗೆ" ಪ್ರಮುಖವಾದ ಆತ್ಮಕಥೆಗಳಾಗಿವೆ. ಇಂತಹ ಅನುಭವಗಳಲ್ಲಿ ವೈಯಕ್ತಿಕವಾದ ದಾಖಲೆಗಳನ್ನು ಮುಚ್ಚುಮರೆಯಾಗಿಸಿರುವುದು ಮತ್ತು ಅವರ ವೈಯಕ್ತಿಕ ಜೀವನವು ಕಹಿ ಘಟನೆಗಳಾಗಿರಬಹುದು ಇಂತಹ ಕಾರಣಗಳಿಂದಾಗಿ ಮರೆಮಾಚುವ ಸಾಧ್ಯತೆ ಹೆಚ್ಚಾಗಿದೆ.

ಆತ್ಮಕಥೆಯನ್ನು ಬರೆಯುವಾಗ ಸ್ವವಿಮರ್ಶೆ ಮಾಡಿಕೊಳ್ಳುವುದು ಮತ್ತು ಮುಕ್ತ ಮನಸ್ಸಿನಿಂದ ರಚನೆ ಮಾಡುವುದು ಸಾಮಾನ್ಯ. ಶ್ರೇಷ್ಠವಾದ ಗದ್ಯದ ನಿರೂಪಣೆ ಈ ಅಂಶಗಳು ಆತ್ಮಕಥೆಯ ಶ್ರೇಷ್ಠತೆಯನ್ನು ಎತ್ತಿಹಿಡಿಯುತ್ತದೆ. ಆತ್ಮಕಥೆಯನ್ನು ಬರೆಯುವಲ್ಲಿ ಲೇಖಕನು ತನ್ನ ಅನುಭವದ ಘಟನೆಗಳನ್ನು ದಾಖಲಿಸಿ ಕೊಳ್ಳುವಲ್ಲಿ ಸ್ವವಿಮರ್ಶೆ ಮಾಡಿಕೊಂಡು ರಚಿಸುತ್ತಾನೆ. ಮುಕ್ತ ಮನಸ್ಸಿನಿಂದ ತನ್ನ ಪಾತ್ರದ ಜೊತೆಗೆ ಇತರ ಪಾತ್ರದ ಮಹತ್ವವನ್ನು ಅರಿತು ರಚಿಸುವುದು. ವಿಶಿಷ್ಟ ನಿರೂಪಣಾ ಶೈಲಿಯೂ ಆತ್ಮಕಥೆಯನ್ನು ಮಹತ್ವದಾಗಿಸುತ್ತದೆ. ಸಾಹಿತ್ಯದ ಭಾಷೆಯನ್ನು ಬಳಸದೇ ಆಡುಮಾತಿನ ಧಾಟಿಯಲ್ಲಿ ರಚಿಸಿರುವುದು ಕನ್ನಡದಲ್ಲಿ ಗುರುತಿಸಬಹುದಾಗಿದೆ. ಪಿ.ಲಂಕೇಶರು ಆತ್ಮಕಥೆಯ ಕುರಿತು

ಬದುಕು ಒಂದು ದೃಷ್ಟಿಯಲ್ಲಿ ಕಾರಣವಿರುವ, ಕಾರಣವಿರಲಾರದ ಅಳುಕು ಪಾಪ ಪ್ರಜ್ಞೆಯ ಸರಮಾಲೆ ಈ ಘಟ್ಟದಲ್ಲಿ ಹೀಗೆನ್ನಿಸುತ್ತದೆ. ಈ ಬದುಕು ಎಂಥೆಂಥ ದ್ವಂದ್ವಗಳ ಮೆರವಣಿಗೆ ಎಂದು ಕಂಡುಕೊಳ್ಳುವುದಕ್ಕಾಗಿ ಲಂಕೇಶರು ಆತ್ಮಕಥೆಯನ್ನು ಸ್ವವಿಮರ್ಶೆಯಿಂದಲೇ ರಚಿಸಿದ್ದು ಹಲವು ಘಟನೆಗಳನ್ನು ಅಳುಕಿನಿಂದ ಮುಚ್ಚಿಟ್ಟಿರುದಾಗಿ ಸ್ಪಷ್ಟಪಡಿಸುತ್ತಾರೆ.

ಆತ್ಮಕಥನಕಾರರು ಅನ್ಯರ ಒತ್ತಾಯದಿಂದಲೊ, ಜೀವನದಲ್ಲಿನ ಘಟನಾವಳಿಗಳನ್ನು ದಾಖಲಿಸಿಕೊಳ್ಳುವುದಕ್ಕೊ, ತನ್ನ ಜೀವನ ಕುರಿತು ಪ್ರಶಂಸಿಸಿಕೊಳ್ಳುವುದಕ್ಕೊ ಬರೆದಿರುವುದು ಕಾಣಬಹುದಾಗಿದೆ. ಕೆಲವು ಲೇಖಕರು ಆತ್ಮಕಥೆಯನ್ನು ಬರೆಯುವಾಗ ಮುಂದಿನ ಪೀಳಿಗೆಗೆ 'ದಾರಿದೀಪ'ವಾಗಲೆಂದು ಬರೆಯುವ ವಾಡಿಕೆಯಿದೆ. ಅಂತಹ ಆತ್ಮಕಥೆಗಳಲ್ಲಿ ತಮ್ಮ ಜೀವನಾನುಭವ ತಿಳಿಸುವ ಮತ್ತು ಮುಂದಿನವರಿಗೆ 'ದಾರಿದೀಪ'ದಂತೆ ಕಾಣುವ ಸಲುವಾಗಿ ರಚನೆ ಮಾಡಿಕೊಂಡಿರಲೂಬಹುದು. ಕಡಿದಾಳ್ ಮಂಜಪ್ಪನವರು ಈ ಕುರಿತಾಗಿ, "ನನ್ನ ಜೀವನದಲ್ಲಿ ಅನೇಕ ಕಷ್ಟಗಳನ್ನು ಅನುಭವಿಸಿದವನು. ಇಂದು ಕಷ್ಟಪಡುತ್ತಿರುವ ಜನರಿಗೆ ನನ್ನ ಅನುಭವವು ಅಲ್ಪಸ್ವಲ್ಪವಾದರೂ ಪ್ರಯೋಜನವಾಗಬಹುದೆಂದು ಈ ಆತ್ಮಕಥೆ ಬರೆದಿದ್ದೇನೆ" ಎಂದು ತಿಳಿಸಿದ್ದಾರೆ. ಈ ಹೇಳಿಕೆಗೆ ವಿರುದ್ಧವಾಗಿ ಶ್ರೀರಂಗರು "ನನ್ನ ಜೀವನಾನುಭವಗಳು ಜನರಿಗೆ ಮಾರ್ಗದರ್ಶನವಾಗುತ್ತದೆ ಎಂದು ಬರೆಯುತ್ತಿಲ್ಲ, ಯಾರ ಅನುಭವವು ಜಗತ್ತಿನ ಇತಿಹಾಸಲ್ಲಿ ಯಾವ ಇನ್ನೊಬ್ಬನಿಗೂ ಮಾರ್ಗದರ್ಶಕವಾಗಲಾರವು ಎಂಬುದನ್ನು ನಾನು ಚೆನ್ನಾಗಿ ಬಲ್ಲೆ' ಎನ್ನುತ್ತಾರೆ. ಮೇಲ್ನೋಟಕ್ಕೆ ಶ್ರೀರಂಗರ ಮಾತುಗಳು ನಿಜವೆಂಬಂತೆ ಗ್ರಹಿಸಿದರೂ, ಅನೇಕ ಸಾಹಿತಿಗಳು, ರಂಗನಟರು, ರಾಜಕಾರಣಿಗಳು, ವಿದ್ವಾಂಸರು, ಸಂಗೀತಗಾರರು, ಸಮಾಜಸೇವಕರು, ಹೋರಾಟಗಾರರು ಮುಂತಾದ ಮಹಾನ್ ವ್ಯಕ್ತಿತ್ವ ಉಳ್ಳವರು ತಮ್ಮ ಜೀವನವನ್ನೇ ಪ್ರೇರಣೆಯಾಗಿಸಿರಿಕೊಂಡು ಬದುಕನ್ನು ಕಟ್ಟಿಕೊಂಡಿರುವುದು ಗಮನಾರ್ಹವಾಗಿದೆ.

ಆತ್ಮಕಥೆಯಲ್ಲಿ ಪ್ರಮುಖ ವಿಷಯವಾಗಿ ಕಂಡುಬರುವುದು ಬಡತನದಿಂದ ಸಾಗಿದ ಬದುಕನ್ನು ತಾವು ಅನುಭವಿಸಿದ ಕಷ್ಟಗಳನ್ನು ಬರೆಯುವುದು ಎದ್ದುಕಾಣುತ್ತದೆ. ಆರ್.ಸಿ.ಹಿರೇಮಠರು "ತಮ್ಮ ಜೀವನದಲ್ಲಿ ಬೆಳದಿಂಗಳಿಗಿಂತ ಬಿಸಿಲೇ ಹೆಚ್ಚು ಏಕೆ? ಎಂದು ಪ್ರಶ್ನಿಸಿಕೊಳ್ಳುತ್ತಾರೆ. ಹೆಚ್.ನರಸಿಂಹಯ್ಯರ "ಹೋರಾಟದಹಾದಿ" ಯಲ್ಲಿ ಕಡುಬಡತನ, ಬಸ್ಸ್‌ಚಾರ್ಜಿಗೆ ದುಡ್ಡಿಲ್ಲದೆ ಬೆಂಗಳೂರಿಗೆ ೫೩ಕಿ.ಮಿ. ನಡೆದಿರುವುದಾಗಿ, ಯಾರ ಬೆಂಬಲವಿಲ್ಲದೆ ಬೆಳೆದು ಪ್ರತಿಷ್ಠಿತ ಸಂಸ್ಥೆಗೆ ಅಧ್ಯಕ್ಷರಾಗಿರುವುದಾಗಿಯೂ ತಿಳಿಸಿದ್ದಾರೆ. ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಅರವಿಂದ ಮಾಲಗತ್ತಿಯವರ ಆತ್ಮಕಥೆಗಳಲ್ಲಿ ಈ ರೀತಿಯ ಬಡತನದಿಂದ ಜೀವನ ಸಾಗಿಸಿರುವುದನ್ನು ಪ್ರಧಾನವಾಗಿ ಚಿತ್ರಿಸಿಕೊಂಡಿದ್ದಾರೆ. ಕೆಲವರು ಬಡತನದ ವಿಚಾರವನ್ನು ತುರುಕುವ ಸಲುವಾಗಿ ಬರೆದು ನಿರಸವಾಗಿಸಿದ್ದಾರೆ.

ಬಡತನದಿಂದಲೇ ಹುಟ್ಟಿಬೆಳೆದು, ಕಷ್ಟಕಾರ್ಪಣ್ಯಗಳನ್ನು ಎದುರಿಸಿ ಆತ್ಮಕಥೆಗಳಲ್ಲಿಯೂ ವಿಶಿಷ್ಟವಾದ ಕೊಡುಗೆಯನ್ನು ನೀಡಿದ್ದು ದಲಿತ ಸಾಹಿತ್ಯ. ಸಿದ್ಧಲಿಂಗಯ್ಯನವರ ಊರುಕೇರಿ, ಮಹಾದೇವನವರ ದ್ಯಾವನೂರು, ಅರವಿಂದ ಮಾಲಗತ್ತಿಯವರ ಗೌರ್ಮೆಂಟ್ ಬ್ರಾಹ್ಮಣ, ಮುಂತಾದವರು ತಮ್ಮ

ಆತ್ಮಕಥೆಗಳಲ್ಲಿ ಬರುವ ಅನುಭವಗಳನ್ನು ಇತರರನ್ನು ಚರ್ಚಿಸುವಂತೆ ಮಾಡಿದ್ದವು. ಆತ್ಮಕಥೆಗಳಲ್ಲಿಯೂ ಪ್ರತಿಭಟನೆಯಾಗಿ ಬರೆದದ್ದು ದಲಿತ ಬಂಡಾಯ ಘಟ್ಟದಲ್ಲಿ ಬಂದಂತಹ ವಿಶಿಷ್ಟತೆ ಎನ್ನಬಹುದು. ಪ್ರಮುಖವಾಗಿ ಈ ಎಲ್ಲಾ ಸಾಹಿತಿಗಳು ಮಧ್ಯವಯಸ್ಸಿನಲ್ಲಿಯೇ ಆತ್ಮಕಥೆಯನ್ನು ಬರೆದವರು. ಈ ಎಲ್ಲಾ ಕಾರಣಗಳಿಂದಲೋ ಆತ್ಮಕಥೆ ಕನ್ನಡದಲ್ಲಿ ಜನಪ್ರಿಯ ಸಾಹಿತ್ಯವಾಗಿದೆ. ಆತ್ಮಕಥನಗಳಲ್ಲಿ ಜೀವನದ ತುದಿಗೆ ಹೋಗಿ ನಿಂತು ಬಾಳನ್ನು ಹಿಂತಿರುಗಿ ನೋಡುವ ಕ್ರಮವಿದೆ. ಆತ್ಮಕಥೆಗಳ ಶೀರ್ಷಿಕೆಗಳು 'ನೆನಪು', 'ಸಂಜೆಗಣ್ಣು', 'ಹಿನ್ನೋಟ', 'ಸ್ಮೃತಿ' ಇತ್ಯಾದಿ ಶಬ್ದಗಳಿರುತ್ತವೆ. ಆದರೆ ಮುಪ್ಪಿನಲ್ಲಿ ಆತ್ಮಕಥೆ ಬರೆವ ಸಂಪ್ರದಾಯವು ೨೦ನೇ ಶತಮಾನದಲ್ಲಿ ದಲಿತ ಸಾಹಿತ್ಯದಿಂದ ಮುರಿದು ಬಿತ್ತು. ಈ ಹಿಂದೆ ನವರತ್ನರಾಮರಾವ್‌ರವರು ಆತ್ಮಕಥೆಗೆ ಹೊಸತನವನ್ನು ಕಟ್ಟಿಕೊಡುವ ಮೂಲಕ ಗುರುತಿಸಿಕೊಂಡಿದ್ದರು. ಆದರೂ ದಲಿತ ಸಾಹಿತ್ಯದ ತಿರುವು ಸಾಹಿತ್ಯದ ಎಲ್ಲ ಪ್ರಕಾರಗಳಲ್ಲಿ ವಿಶೇಷತೆ ಮೆರೆಯಿತು.

ಮಹಿಳಾ ಬರಹಗಾರರೂ ಕೂಡ ಆತ್ಮಕಥೆಗಳ ಬರವಣಿಗೆಯಲ್ಲಿ ತೊಡಗಿಕೊಂಡಿರುವುದು ಅಂತವರಲ್ಲಿ ಅನುಪಮಾ ನಿರಂಜನರ 'ಬರಹಗಾರ್ತಿಯ ಬದುಕು', ಜಯಮ್ಮ ಅಭಿನೇತ್ರಿ ತಾರಿಣಿಯವರ 'ಮಗಳು ಕಂಡ ಕುವೆಂಪು', ವಿಜಯಾದಬ್ಬೆಯವರ 'ಲೇಖ-ಲೋಕ', ಸಾರಾರವರ 'ಮುಸ್ಲಿಂ ಹುಡಿಗಿ ಶಾಲೆಕಲೆತದ್ದು', ಮುಂತಾದವರು ಆತ್ಮಕಥೆಯನ್ನು ಬರೆದವರಾಗಿದ್ದು, ಪುರುಷರಂತೆ ಮುಕ್ತಮನಸ್ಸಿನಿಂದ ಬರೆಯಲು ಸಾಧ್ಯವಾಗಿಲ್ಲ, ಮಹಿಳೆಯರಿಗೆ ಸಮಾಜದ ಚೌಕಟ್ಟು ಅತೀಯಾಗಿರುವುದು ಕಾರಣವಾಗಿರಬಹುದು. ಕಮಲಾದಾಸ್ ಪ್ರತಿಮಾಬೇಡಿ, ಅಮೃತಾಪ್ರೀತಂ, ಇವರ ಆತ್ಮಕಥೆಗಳ ನಾಯಕಿಯರು ದಿಟ್ಟೆಯರು ಅನಿಸುವುದರ ಜೊತೆಯಲ್ಲಿ ಹಾದರದವರು ಎಂದು ಸಹ ಅನಿಸಿಬಿಡುವ ಸಾಮಾಜಿಕ ಮನೋಧರ್ಮದ ಒತ್ತಡವಿನ್ನೂ ಇದೆ."[೪] ಮಹಿಳಾ ಬರಹಗಾರರಿಗೆ ಅಕ್ಕಾಮಹಾದೇವಿಯೇ ಆಧುನಿಕತೆಯಲ್ಲೂ ಪ್ರೇರಣೆಯಾಗಿದ್ದಾರೆ. "ಅವರ ವಚನಗಳಲ್ಲಿ ಸ್ವತಂತ್ರ ಪ್ರವೃತ್ತಿಗೆ ಅವಳ ಕಾಲದ ಸಂಪ್ರದಾಯಿಕ ಪುರುಷ ಸಮಾಜ ತತ್ತರಿಸಿ ಹೋಗಿರಬೇಕು. ಈ ತತ್ತರಿಕೆಯನ್ನು ಅಕ್ಕ ಬೆತ್ತಲೆಯಾಗಿ ಮನೆಬಿಟ್ಟು ಹೋದ ಪ್ರಸಂಗಕ್ಕೆ ನಾಲ್ಕು ಶೂನ್ಯ ಸಂಪಾದನೆಗಳು ಮಾಡಿರುವ ಪ್ರತಿಕ್ರಿಯೆಗಳಲ್ಲಿ ಕಾಣಬಹುದು."[೫]

ಆತ್ಮಕಥೆಗಳನ್ನು ಕೇವಲ ಸಾಹಿತಿಗಳೇ ಬರೆದುಕೊಂಡಿಲ್ಲ, ರಾಜಕಾರಣಿಗಳು, ಚಿತ್ರನಟರು, ಹೋರಾಟಗಾರರು, ಉನ್ನತಹುದ್ದೆಯಲ್ಲಿರುವರು, ಮಠಾಧೀಶರು, ಸೈನಿಕರು, ರಂಗನಟರು, ಸಾಮಾನ್ಯರು, ರೋಗಗ್ರಸ್ಥರು ಬರೆದುಕೊಂಡಿದ್ದಾರೆ. ಆತ್ಮಕಥಾ ಸಾಹಿತ್ಯ ಪ್ರಕಾರವು ಸಾರ್ವತ್ರಿಕ ಸಾಹಿತ್ಯವಾಗಿ ಎಲ್ಲ ಜನರು ತಮ್ಮ ಅನುಭವಗಳನ್ನು ವ್ಯಕ್ತಪಡಿಸಿರುವುದು ಕಂಡುಬಂದಿದೆ. ಸಾಹಿತಿಗಳಾಗಲಿ ಬೇರೆ ರಂಗದಲ್ಲಿರುವ ವ್ಯಕ್ತಿಗಳಾಗಲಿ ಆತ್ಮಕಥೆ ರಚಿಸುವ ಆಕರಗಳ ದಾಖಲು ಮಾಡಿಕೊಂಡಿಲ್ಲ. ಕೇವಲ ದಿನಚರಿ, ಟಿಪ್ಪಣಿ, ನೆನಪಿನ ಶಕ್ತಿಯಿಂದಲೇ ತಮ್ಮ ಅನುಭವಗಳನ್ನು ದಾಖಲು ಮಾಡಿಕೊಂಡಿದ್ದಾರೆ. ಸಾಹಿತಿಗಳಲ್ಲೂ ಈ ತರಹದ ಅಭಿಪ್ರಾಯಗಳು ವ್ಯಕ್ತವಾಗಿವೆ. ಹೆಚ್.ನರಸಿಂಹಯ್ಯನವರು ದಿನಚರಿ, ಫೋಟೋ, ಟಿಪ್ಪಣಿಗಳನ್ನಿಟ್ಟಿಲ್ಲ

ಅಮೆರಿಕಾ ಪ್ರವಾಸದಲ್ಲಿದ್ದಾಗ ಒಂದು ಪುಸ್ತಕದಲ್ಲಿ ಕೆಲವು ಘಟನೆಗಳ ತಾರೀಖುಗಳನ್ನು ಗುರುತು ಹಾಕಿಕೊಂಡಿದ್ದೇ ಆತ್ಮಕಥೆ ರಚನೆಗೆ ಸಾಕ್ಷಿಯಾಗಿತ್ತು" ಎಂದು ತಿಳಿಸಿದ್ದಾರೆ. ಕಾರಂತ, ಹೆಚ್.ನರಸಿಂಹಯ್ಯ, ಕಡಿದಾಳ್ ಮಂಜಪ್ಪ, ಚಿತ್ರನಟಿ ಜಯಂತಿ, ಎ.ಎನ್.ಮೂರ್ತಿರಾವ್ ಮುಂತಾದವರು ತಮ್ಮ ಸ್ನೇಹಿತರಲ್ಲಿ ಹೇಳಿಕೊಂಡು ಘಟನೆಗಳನ್ನು ಆಧಾರಿಸಿ, ನೆನಪಿನ ಶಕ್ತಿಯಿಂದಲೇ ಬರೆದುಕೊಂಡಿದ್ದಾರೆ.

ಚಿತ್ರನಟರಾದ ರಾಜ್‌ಕುಮಾರ್, ಜಯಂತಿ, ಫಂಡರಿಭಾಯಿ, ರಾಜಕಾರಣಿಗಳು, ರಂಗಭೂಮಿಯ ಗುಬ್ಬಿವೀರಣ್ಣ, ಸರ್ಕಾರಿ ಹುದ್ದೆಗಳಲ್ಲಿದ್ದು ಅನುಭವಗಳನ್ನು ದಾಖಲಿಸಿದಂತಹ ನವರತ್ನ ರಾಮರಾವ್, ನಾಗಲೋಟಿಮಠ, ಡಾ.ರಮಾನಂದ, ಸಿ.ಜಿ.ಕೆ, ಮಠಾಧೀಶರು, ಸಮಾಜಸೇವಕರೂ ಸಹ ಆತ್ಮಕಥೆಯನ್ನು ಸಾಹಿತಿಗಳಂತೆ ಶ್ರೇಷ್ಠವಾಗಿ ನಿರೂಪಿಸಿದ್ದು ಕಾಣುತ್ತದೆ. ಆತ್ಮಕಥೆಯ ಗದ್ಯದ ನಿರೂಪಣೆಯೇ ಇದಕ್ಕೆ ಪ್ರಮುಖವಾದ ಸಾಕ್ಷಿಯಾಗಿದೆ. ಅದಕ್ಕಾಗಿಯೇ ಎಲ್ಲಾ ರಂಗಗಳಲ್ಲಿನ ಮೇರು ವ್ಯಕ್ತಿತ್ವದಿಂದ ಶ್ರೀ ಸಾಮಾನ್ಯ ರೈತರು ಇತ್ತೀಚಿಗೆ ಆತ್ಮಕಥೆಯನ್ನು ಬರೆದಿದ್ದಾರೆ. ಅನಕ್ಷರಸ್ಥರೂ ಕೂಡ ತಮ್ಮ ಅನುಭವಗಳನ್ನು ಹೇಳಿ ಬರೆಸಿಕೊಂಡಿರುವುದು ಕಾಣುತ್ತೇವೆ. ಇಂತಹ ಆತ್ಮಕಥೆಗಳಲ್ಲಿ ಸೃಜನಶೀಲ ಸಾಹಿತ್ಯವು ಎಷ್ಟರ ಮಟ್ಟಿಗೆ ಅಳವಡಿಕೆಯಾಗಿರುತ್ತದೆ ಎಂಬುದೇ ಸಾಹಿತ್ಯ ವಲಯದ ಚರ್ಚೆಯಾಗಿದೆ.

ಆತ್ಮಕಥೆಗಳು ಕೇವಲ ಪುಸ್ತಕ ರೂಪದಲ್ಲಿ ಬರುವುದರ ಜೊತೆಗೆ ಲೇಖನಗಳಾಗಿ ಹೊರಬಂದಿರುವುದನ್ನು ಕಾಣಬಹುದು. ಸುಧಾ, ಕರ್ಮವೀರ, ಪ್ರಜಾವಾಣಿ, ವಿಜಯಕರ್ನಾಟಕ ಪತ್ರಿಕೆಗಳಲ್ಲಿ ಅನೇಕರ ಆತ್ಮಕಥೆಗಳು ಪ್ರಕಟವಾಗಿವೆ. ನವರತ್ನರಾಮರಾವ್‌ರವರ ಜೀವನ ವೃತ್ತಾಂತವು 'ಜೀವನ' ಪತ್ರಿಕೆಯಲ್ಲಿ ೧೯೫೦ರಲ್ಲಿ ಬಂದಿರುವುದು ಗಮನಾರ್ಹವಾಗಿದೆ. ಸುಧಾ ವಾರಪತ್ರಿಕೆಯಲ್ಲಿ ರಂಗಭೂಮಿ ನಟರಾದ ಕೊಟ್ಟೂರಪ್ಪ, ನಾಗರತ್ನಮ್ಮರವರ ಜೀವನ ಕುರಿತ ಲೇಖನಗಳು ಪ್ರಕಟವಾಗಿವೆ. ಚಿತ್ರನಟ, ರಾಜ್‌ಕುಮಾರ್‌ರವರ ಹೃದ್ಯವಾದ ಆತ್ಮಕಥೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು (೧೯೭೦)[೬] ಇಂತಹ ಲೇಖನಗಳು ಆತ್ಮಕಥೆಯಾಗಿ ಪುಸ್ತಕ ರೂಪದಲ್ಲಿಯೂ ಪ್ರಕಟಣೆಗೊಂಡಿದ್ದು ಯಾವುದೇ ಸಾಹಿತ್ಯ ಪ್ರಕಾರಗಳಿಗೆ ಕಡಿಮೆಯಾಗದಂತೆ ರಚನೆಯಾಗಿದ್ದು ವಿಶೇಷತೆಯಾಗಿದೆ.

ಕನ್ನಡ ಸಾಹಿತ್ಯದ ಹಲವು ಪ್ರಕಾರಗಳನ್ನು ಸೃಜನಶೀಲ ಸಾಹಿತ್ಯವೆಂದು ತಿಳಿಸುವ ಸಾಹಿತಿಗಳು ಆತ್ಮಕಥೆ ವಿಚಾರಕ್ಕೆ ಬಂದಾಗ ಸೃಜನಶೀಲ ಸಾಹಿತ್ಯವೆಂಬುದನ್ನು ತಿರಸ್ಕರಿಸುತ್ತಾ ಬಂದಿದ್ದಾರೆ. ಕಾದಂಬರಿಗಳಷ್ಟೇ ಆತ್ಮಕಥೆಗಳು ಶ್ರೇಷ್ಠವಾಗಿ ರಚನೆಯಾಗಿದ್ದರೂ, ಅವುಗಳಿಗೆ ಶಿಷ್ಟಸಾಹಿತ್ಯದ ಮನೋಭಾವ ತೋರುತ್ತಿಲ್ಲ. ಶಿಷ್ಟ ಸಾಹಿತ್ಯವೆಂದು ಒಪ್ಪಿತವಾದರೂ ಸಾಹಿತ್ಯ ಪ್ರಕಾರಗಳಿಗೆ ಸಿಗುವ ಮನ್ನಣೆ ಆತ್ಮಕಥೆಗೆ ಸಿಗುತ್ತಿಲ್ಲ. "ಸಾಹಿತ್ಯಿಕ ವಲಯದ ಅಧ್ಯಯನದಲ್ಲಿ 'ಸಾಹಿತ್ಯ' ಎಂಬುದು ಒಂದು ಗಂಭೀರ ನೆಪವಾಗಿದ್ದು ಚರ್ಚಿಸುವ ಮತ್ತು ತಾತ್ವೀಕರಿಸುವ ಕ್ರಮಗಳಲ್ಲಿ ಸಾಂಸ್ಕೃತಿಕ ಹಾಗೂ ಸೈದ್ಧಾಂತಿಕ ಪ್ರಶ್ನೆಗಳು

ಮುಂಚೂಣಿಗೆ ಬರುತ್ತವೆ"[1] ಇಂತಹ ಹಲವಾರು ಸತ್ಯಾಸತ್ಯತೆಗಳು ಆತ್ಮಕಥೆಯ ನೈಜತೆ ಮತ್ತು ಸಾಹಿತ್ಯದ ಶ್ರೇಣೀಕರಣದ ಟೀಕೆಗೆ ಒಳಗಾಗುತ್ತಲಿವೆ. ಇಂತಹ ಆತ್ಮಕಥೆಗಳು ಮತ್ತು ಜೀವನ ಚರಿತ್ರೆಗಳಲ್ಲಿನ ಸಂಭೋದಿಸುವಂತಹ ಪ್ರತ್ಯಯಗಳಿಗನುಗುಣವಾಗಿ ಬೇರ್ಪಟ್ಟಿರುವುದು ಅಸಹಜವೆನಿಸುತ್ತದೆ. ಜೀವನ ಚರಿತ್ರೆಯನ್ನು ಬರೆಯುವವನು ಸಾಹಿತಿಗಳು, ಪಂಡಿತರು, ಬರಹಗಾರರು, ಮುಂತಾದ ಬುದ್ಧಿಜೀವಿಗಳಿಂದ ರಚನೆಯಾಗುತ್ತದೆ. ಆತ್ಮಕಥೆಯು ಇದಕ್ಕೆ ಭಿನ್ನವಾಗಿ ಅನಕ್ಷರಸ್ಥರು ರಚಿಸುತ್ತಿದ್ದು ಈ ತಾರತಮ್ಯತೆಗೆ ಕಾರಣವಾಗಿರಬಹುದಾಗಿದೆ.

ಆತ್ಮಕಥೆಯನ್ನು ಶಾಸನಗಳಲ್ಲಿ, ಪೌರಾಣಿಕ ಕೃತಿಗಳಲ್ಲಿ ಕಾದಂಬರಿಗಳಲ್ಲಿ ಆತ್ಮ ಕಥಾಂಶವುಳ್ಳ. ಪ್ರತ್ಯಯಗಳಿಂದ ಗುರುತಿಸಿದ್ದಾರೆ. ಇಂತಹ ಪ್ರತ್ಯಯಗಳಿಂದ ಗುರುತಿಸುವುದಾದರೆ ಪದ್ಯದಲ್ಲಿಯೂ ಗುರುತಿಸಬಹುದಾಗಿದೆ. ಕುವೆಂಪು, ದ.ರಾ.ಬೇಂದ್ರೆ ಯವರಂತವರ ಪದ್ಯಗಳಲ್ಲಿ ವೈಯುಕ್ತಿಕವಾದ ಬದುಕನ್ನು ಕಟ್ಟಿಕೊಂಡಿದ್ದಾರೆ. ಉದಾಹರಣೆಗೆ ದ.ರಾ.ಬೇಂದ್ರೆಯವರ "ನೀ ಹೀಂಗೆ ನೋಡಬೇಡ ನನ್ನ" ಪದ್ಯದಲ್ಲಿ ತಮ್ಮ ಮಗು ಸತ್ತ ಸಂದರ್ಭದಲ್ಲಿ ಹೊರಹೊಮ್ಮಿದ ಭಾವನೆಗಳೇ ಪದ್ಯವಾಗಿಸಿದ್ದು ಬೇಂದ್ರೆಯವರ ವೈಯುಕ್ತಿಕವಾದ ಜೀವನವೇ ಆಗಿದೆ. ಕುವೆಂಪು, ರಾಜರತ್ನಂ, ನಿಸಾರ್‌ಅಹಮದ್, ಅಡಿಗ ಕೆ.ಎಸ್. ನರಸಿಂಹಸ್ವಾಮಿ, ಶಿವರುದ್ರಪ್ಪ ಮುಂತಾದವರ ಪದ್ಯಗಳಲ್ಲಿ ತಮ್ಮ ಅನುಭವವನ್ನು ಭಾವಪೂರ್ವಕವಾಗಿ ವ್ಯಕ್ತಪಡಿಸಿಕೊಂಡಿರುವುದು ಕಂಡು ಬರುತ್ತಿದೆ. ಆತ್ಮಕಥೆಯ ಅಂಶಗಳನ್ನು ಹೊರತುಪಡಿಸಿ ನೋಡುವುದು ಹೆಚ್ಚು ಸೂಕ್ತವೆನಿಸುತ್ತದೆ. ಸಾಹಿತ್ಯದ ಪ್ರಕಾರಗಳಲ್ಲಿ ಒಳಸಂಬಂಧಗಳ ಕೊಂಡಿಹಾಕಬಹುದೇ ವಿನಃ ಎರಡನ್ನೂ ಕೂಡಿಸುವುದು ಸೂಕ್ತವಾಗುವುದಿಲ್ಲ. ಪದ್ಯಗಳಲ್ಲಿನ ವಿಶಿಷ್ಟತೆಯು ಆತ್ಮಕಥೆಗಳಲ್ಲಿ ಕಂಡು ಬರುವುದಿಲ್ಲ ಹಾಗಾಗಿಯೇ ಭಿನ್ನವಾಗಿ ನಿಲ್ಲುತ್ತವೆ.

ಆತ್ಮಕಥೆಯು ಗದ್ಯದ ಪ್ರಕಾರವಾಗಿದ್ದು ಎಲ್ಲರಿಗೂ ಅನುಭವಗಳನ್ನು ಬರೆದುಕೊಳ್ಳುವ ಸ್ವಾಂತ್ರವಿದ್ದರೂ ದುರುಪಯೋಗ ಪಡೆದುಕೊಳ್ಳದೇ ಮತ್ತೊಬ್ಬರ ಜೀವನಕ್ಕೆ ದಾರಿದೀಪವಾಗುವಂತಿರಬೇಕು. ಲೇಖಕನ ಕಷ್ಟವನ್ನೇ ಅತಿಯಾಗಿ ಬಿಂಬಿಸಿಕೊಂಡಿರಬಾರದು. ಲೇಖಕನು ತನ್ನನ್ನು ತಾನು ಹೇಳಿಕೊಳ್ಳುವ ಸಂದರ್ಭಗಳು ಅತಿಯಾಗಿರಬಾರದು. ಆತ್ಮಕಥೆ ಎಂದಾಕ್ಷಣ ವ್ಯಕ್ತಿಯೊಬ್ಬನ ಜೀವನ ವಿವರ ಎಂದೇ ತಿಳಿಯಲಾಗದು. ಸಮಾಜದಲ್ಲಿ ವ್ಯಕ್ತಿಯು ಅವನ ಜೀವನವೂ ಭಾಗವಾಗಿರುವುದರಿಂದಲೂ ಅವನ ಸುತ್ತಮುತ್ತಲಿನ ಪರಿಸರವೂ ಅಷ್ಟೇ ಮುಖ್ಯವೆನಿಸುತ್ತದೆ. ಸಂದರ್ಭಕ್ಕೆ ತಕ್ಕಂತೆ ಇತರೆ ಪಾತ್ರಗಳ ಸ್ವಾತಂತ್ರ್ಯತೆಯ ಬಳಕೆ ಆತ್ಮಕಥೆಗಳನ್ನು ಉತ್ತಮವಾಗಿಸುತ್ತವೆ. ಉದಾಹರಣೆಗೆ:- ನಾಗಲೋಟಿಮಠ -ಬಿಚ್ಚಿದ ಜೋಳಿಗೆ, ನವರತ್ನರಾಮರಾವ್ -ಕೆಲವು ನೆನಪುಗಳು.

ಆತ್ಮಕಥೆಗಳು ಆಧುನಿಕತೆಯ ವಿಶಿಷ್ಟ ಪ್ರಕಾರಗಳಲ್ಲಿ ಒಂದಾಗಿದ್ದು ಭಾಷೆಯ ನಿರೂಪಣೆಯಲ್ಲಿಯೂ ಕಠಿಣತೆ ತೋರದೆ ಸರಳವಾಗಿ ಓದುಗರ ಮನಮುಟ್ಟುತ್ತವೆ. ಜೀವನ ವಿವರಗಳನ್ನು ಕಟ್ಟಿಕೊಡುವಲ್ಲಿ

ಅಸಹಜತೆಯನ್ನು ತೋರದೆ ಸಹಜವಾಗಿಯೇ ನಿರೂಪಿತವಾಗಿವೆ. ಆತ್ಮಕಥೆಗಳು ವಾಸ್ತವತೆಗೆ ಹತ್ತಿರವಾಗಬೇಕೇ ವಿನಃ ವೈಭವಪೂರ್ವಕವಾಗಿ ಚಿತ್ರಿಸಿರಬಾರದು. ವ್ಯಕ್ತಿಯ ಸಂಪೂರ್ಣ ವಿವರವನ್ನು ದಾಖಲಿಸಿಕೊಳ್ಳಬೇಕು, ಜೀವನದ ವಿವರಗಳು ಬೇರೆಯವರ ಜೀವನಕ್ಕೆ ಮುಳುವಾಗಿರಬಾರದು ಮತ್ತು ಅಂತಹ ವಿಚಾರಗಳನ್ನು ದಾಖಲಿಸುವುದು ಸೂಕ್ತವಲ್ಲ. ಸಮಾಜದ ಚೌಕಟ್ಟಿಗೆ ಒಳಪಟ್ಟು ರಚಿಸುವುದು ಉತ್ತಮವೆನಿಸುತ್ತದೆ. ಆತ್ಮಕಥೆಗಳಲ್ಲಿ ಸಂಸಾರಿಕ ಜೀವನವನ್ನೇ ಹೆಚ್ಚು ದಾಖಲಿಸಿಕೊಳ್ಳದೇ ಸೂಕ್ತ ಅನುಭವಗಳನ್ನು ತಿಳಿಸುವಂತಿವೆ. ಇಂತಹ ಅನುಭವಗಳು ನೀರಸವಾಗದೆ ಕುತೂಹಲಕಾರಿಯಾಗಿಯೋ, ಭಾವಪೂರ್ವಕವಾಗಿಯೋ, ಸುತ್ತಮುತ್ತಲಿನ ಪರಿಸರಕ್ಕೆ ಹತ್ತಿರವಾಗಿಯೋ, ಸಮಾಜವನ್ನು ಪ್ರತಿಬಿಂಬಿಸುವಂತೆಯೋ ರಚಿಸುವುದು ಆತ್ಮಕಥೆಗೆ ಹೆಚ್ಚು ಯಶಸ್ಸನ್ನು ತಂದುಕೊಡಲು ಸಾಧ್ಯವಾಗುತ್ತದೆ.

ಆತ್ಮಕಥೆಗಳಲ್ಲಿ ಸಮಾಜದಲ್ಲಿ ನಡೆಯುವ ಅನ್ಯಾಯಗಳ ವಿರುದ್ಧ ಪ್ರತಿಭಟಿಸುವ ಉದ್ದೇಶವೂ ಒಳಗೊಂಡಿರಬೇಕು. ತಮ್ಮ ಕಷ್ಟ ಸುಖಗಳ ಹಂಚಿಕೆಯ ಜೊತೆಗೆ ಸಮಾಜದ ವಾಸ್ತವ ಚಿತ್ರಣದ ಪ್ರತಿಬಿಂಬವಾಗಿರಬೇಕು. ದಲಿತ ಸಾಹಿತ್ಯ ಲೇಖಕರಲ್ಲಿ ಈ ತರಹದ ಪ್ರತಿಭಟನೆಗಳು ಕಂಡುಬಂದರೂ ಅವುಗಳೂ ಒಂದು ಜಾತಿಗೆ ಸೀಮಿತಗೊಂಡಂತಿವೆ. ವೈಯಕ್ತಿಕ ಜೀವನ ಹೊರತಾಗಿ ಜೀವನ ರೂಪಿಸಿಕೊಂಡವರು ಸಾರ್ವಜನಿಕರ ಧ್ವನಿಯಾಗಿ ಆತ್ಮಕಥೆಗಳಲ್ಲಿ ನಿಲ್ಲಬೇಕು. ಪ್ರತಿಯೊಬ್ಬ ವ್ಯಕ್ತಿಗೆ ಹೆಂಡತಿ, ಮಕ್ಕಳು, ಕಷ್ಟ-ಸುಖ, ಬಡತನ-ಶ್ರೀಮಂತಿಕೆ, ಮುಂತಾದ ಅಂಶಗಳು ಸಹಜವಾಗಿರುತ್ತವೆ. ಇಂತಹ ಆತ್ಮಕಥೆಗಳು ಓದುಗನಿಗೆ ವಿಶೇಷವೆನಿಸದೇ ಹೋಗುತ್ತವೆ. ಆತ್ಮಕಥೆಗಳು ಓದುಗರ ಕರುಣೆಯನ್ನು ಗಿಟ್ಟಿಸಿಕೊಳ್ಳಬಹುದೇ ವಿನಃ ತಾತ್ವಿಕವಾಗಿ ನೋಡಿದಾಗ ಅದರಿಂದ ಪ್ರಯೋಜನವಾದರೂ ಏನೆಂದು ಅನಿಸದೇ ಇರಲಾರದು. ಇತ್ತೀಚಿಗೆ ಆತ್ಮಕಥೆಗಳಲ್ಲಿನ ಬರಹಗಳು ಸೃಜನಶೀಲ ಸಾಹಿತ್ಯಕ್ಕೆ ದಾರಿಯಾದಂತಿಲ್ಲ. ಕೇವಲ ವ್ಯಕ್ತಿಯೊಬ್ಬನ ಆತ್ಮ ಸಂತೋಷಕ್ಕಾಗಿ ಬರೆದುಕೊಳ್ಳುವ ಮನೋಭಾವಗಳು ನಿಲ್ಲಬೇಕಾಗಿದೆ. ಆತ್ಮಕಥೆಗಳ ಮೌಲ್ಯಗಳನ್ನು ಕಾಪಾಡುವ ಅವಶ್ಯಕತೆಯಿದ್ದು ಸಾಹಿತ್ಯದ ಇತರೆ ಪ್ರಕಾರಗಳಿಗೆ ಸಿಗುವ ಮನ್ನಣೆ ಆತ್ಮಕಥೆಗಳಿಗೂ ಸಿಗುವಂತಹ ದಾರಿಯಲ್ಲಿ ಸಾಗಬೇಕಾಗಿದೆ.

* * *

## ಅಡಿಟಿಪ್ಪಣಿ

೧. ಓ.ಎಲ್.ನಾಗಭೂಷಣ ಸ್ವಾಮಿ, ವಿಮರ್ಶೆಯ ಪರಿಭಾಷೆ, ೧೯೮೮, ಪುಟ-೨೬

೨. ಡಾ.ಶರಣಮ್ಮ ಅ.ಗೋರೇಬಾಳ, ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆ, ೨೦೦೨, ಪುಟ-೩

೩. ಅಲೂರು ವೆಂಕಟರಾಯ, ನನ್ನ ಜೀವನದ ಸ್ಮೃತಿಗಳು, ೧೯೭೩, ಪುಟ-೨

೪. ರಹಮತ್ ತರೀಕೆರೆ, ಆತ್ಮಕಥೆ ಗದ್ಯದ ಅಧೋಲೋಕ, ಲೇಖನ, ದೇಶಕಾಲ, ಸಂ-೧೪

೫. ವಿಜಯಾದಬ್ಬೆ, ಅಕ್ಕನ ಸಂಪಾದನೆ: ಒಂದು ಪರಿಶೀಲನೆ (೧೯೮೩)

೬. ಕನ್ನಡ ವಿಶ್ವವಿಷಯ ಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪುಟ-೨೭೫

೭. ಡಾ.ಬಿ.ಎಂ.ಪುಟ್ಟಯ್ಯ, ಆತ್ಮಕಥೆಗಳಲ್ಲಿ ಕರ್ನಾಟಕದ ಕತೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯, ಪುಟ-೦೭

# ಅಧ್ಯಾಯ - ನಾಲ್ಕು

## ನವರತ್ನ ರಾಮರಾವ್ ಅವರ ಜೀವನ ಕುರಿತ ಕೆಲವು ವಿವರಗಳು

<u>ಅಧ್ಯಾಯ - ನಾಲ್ಕು</u>

# ನವರತ್ನ ರಾಮರಾವ್ ಅವರ ಜೀವನ ಕುರಿತ ಕೆಲವು ವಿವರಗಳು

ನವರತ್ನ ರಾಮರಾವ್ ಅವರು ಮೈಸೂರು ಸರ್ಕಾರದಲ್ಲಿ ಹಲವು ಉನ್ನತ ಹುದ್ದೆಗಳಲ್ಲಿ ದಕ್ಷತೆಯಿಂದ ಕಾರ್ಯ ನಿರ್ವಹಿಸಿ ಮನೆ ಮಾತಾದವರು. ಇಂಗ್ಲೀಷ್ ಉಪಾಸಕರಾದ ರಾಯರು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆ ಅನನ್ಯವಾದದ್ದು. ರಾಯರು ತಮ್ಮ ವೃತ್ತಿ ಬದುಕಿನ ಅನುಭವಗಳನ್ನು 'ಕೆಲವು ನೆನಪುಗಳು' ಪುಸ್ತಕದಲ್ಲಿ ದಾಖಲಿಸಿಕೊಳ್ಳುವ ಮೂಲಕ ಕನ್ನಡದಲ್ಲಿ ಶ್ರೇಷ್ಠ ಆತ್ಮಕಥೆಗಳ ಸಾಲಿನಲ್ಲಿ ಗುರುತಿಸಿಕೊಂಡಿದ್ದಾರೆ. ಕನ್ನಡದ ಮೇಲೆ ತೋರಿದ ಮಮತೆಯು ಅವರನ್ನು ಕತೆಗಳು ಹಾಗೂ ಲೇಖನಗಳನ್ನು ಬರೆಯುವಂತೆ ಪ್ರೇರೆಪಿಸಿದವು. ರಾಯರ ನೆನಪುಗಳು ಪುಸ್ತಕದಲ್ಲಿ ವೃತ್ತಿ ಬದುಕಿನ ಅನುಭವಗಳನ್ನು ದಾಖಲಿಸಿದ್ದಾರೆ. ಹೀಗಾಗಿ ವೈಯಕ್ತಿಕ ಜೀವನದ ಮೇಲೆ ಬೆಳಕು ನೀಡುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶವಾಗಿದೆ.

ನವರತ್ನರಾಮರಾವ್ ಅವರು ೧೮೭೭ ಮೇ ೨೭ರಂದು ಮೈಸೂರಿನಲ್ಲಿ ಜನಿಸಿದರು. ತಂದೆ ನವರತ್ನ ಬಾಲಕೃಷ್ಣರಾಯರು, ತಾಯಿ ರಾಮರಾವ್‌ರ ಸಣ್ಣ ವಯಸ್ಸಿನಲ್ಲಿ ತೀರಿಕೊಂಡಿದ್ದರಿಂದ ಅವರ ಹೆಸರು ತಿಳಿದುಬಂದಿಲ್ಲ. ವೈದಿಕ ಮನೆತನದ ಇವರು 'ನವರತ್ನ' ಮನೆತನವೆಂದೇ ಮನೆ ಮಾತಾದವರು, ನವರತ್ನ ಮನೆತನವು ಉತ್ತಾರಾಧಿಮಠಕ್ಕೆ ಸೇರಿದ್ದರಿಂದ ಇವರ ಪೂರ್ವಜರು ಹಲವು ಶಾಸ್ತ್ರಗಳಲ್ಲಿ ಅಸಾಧಾರಣ ಪಂಡಿತರಾಗಿದ್ದರು. ಈ ಮನೆತನದ ಹಿರಿಯರು ಮಠದ ಅಂದಿನ ಸ್ವಾಮಿಗಳ ಸನ್ನಿಧಿಯಲ್ಲಿದ್ದಾಗ ನೀವು ನಮ್ಮ ಮನೆತನದ ಪಂಡಿತರು, ಒಂಬತ್ತು ಜನ ಒಂಬತ್ತು ರತ್ನವಾಗಿದ್ದಿರಿ, ನೀವು ನಮ್ಮ ಮಠದ ಆಸ್ತಿ 'ನವರತ್ನ' ದಂತಿದ್ದಿರಿ ಎಂದರಂತೆ, ಅಂದಿನಿಂದ ರಾಯರ ಮನೆತನಕ್ಕೆ 'ನವರತ್ನ' ಮನೆತನ ಎಂದು

ಕರೆಯುವುದು ವಾಡಿಕೆಯಾಯಿತು. ಆ ನಂತರದಲ್ಲೂ ಇವರ ಮನೆತನದಿಂದ ಒಬ್ಬಿಬ್ಬರು ಈ ಮಠದಲ್ಲಿ ಸ್ವಾಮಿಗಳಾಗಿ ಮುಂದುವರೆದಿದ್ದರು.

ರಾಮರಾವ್ ತಂದೆಯವರು ಮೈಸೂರು ಸರ್ಕಾರದಲ್ಲಿ ಇಂಜಿನಿಯರ್ ಇಲಾಖೆಯಲ್ಲಿ ಅಧಿಕಾರಿಯಾಗಿದ್ದರು. ಇವರ ಹೆಂಡತಿ ತೀರಿ ಕೊಂಡಾಗ ಎರಡನೇ ಮದುವೆಯಾದರು, ರಾಯರಿಗೆ ಮಲತಾಯಿ ಬಂದ ಹೊಸದರಲ್ಲಿಯೇ ಕುಟುಂಬದಲ್ಲಿ ವಿರಸ ಕಂಡುಬಂದು ಸಂಬಂಧಗಳು ಮಧುರವಾಗದೇ ಕೊನೆಗೆ ರಾಯರೇ ಮನೆಯನ್ನು ಬಿಡುವ ಪರಿಸ್ಥಿತಿಯೊದಗಿತು. ರಾಯರು ಮತ್ತು ಅವರ ಸಹೋದರಿಯು ಚಿಕ್ಕವಯಸ್ಸಿನಲ್ಲಿ ತಂದೆ ತಾಯಿಯ ಪ್ರೀತಿಯನ್ನು ಕಳೆದುಕೊಂಡು ಸೋದರ ಮಾವನ ಮನೆ ಸೇರಿದರು. ಇವರಿಬ್ಬರ ವಿದ್ಯಾಭ್ಯಾಸವನ್ನು ಮಾವಂದಿರೇ ನೋಡಿಕೊಂಡರು, ಚಿಕ್ಕವಯಸ್ಸಿನಲ್ಲಿ ಅತ್ತೆಯ ಪ್ರೀತಿಯ ಕೈಗಳಿಂದ ತಂಗಳನ್ನವನ್ನು ತಿನ್ನುತ್ತ ಬೆಳೆಯಬೇಕಾಯಿತು.

ರಾಯರ ಪ್ರಾಥಮಿಕ ಶಿಕ್ಷಣದ ಮಾಹಿತಿಯೂ ಎಲ್ಲಿಯೂ ತಿಳಿದುಬಂದಿಲ್ಲ. ಚಿಕ್ಕವಯಸ್ಸಿನಲ್ಲಿಯೇ ಬುದ್ಧಿವಂತರೆನಿಸಿಕೊಂಡಿದ್ದರು. ಆಟ ಮತ್ತು ಮಾತುಗಾರಿಕೆಯಲ್ಲಿ ನಿಪುಣರಾಗಿದ್ದರು, ವಿದ್ಯಾರ್ಥಿ ಜೀವನದಿಂದಲೇ ಎದೆಗಾರಿಕೆಯ ವ್ಯಕ್ತಿತ್ವ ಹೊಂದಿದ ರಾಯರು ಯಾರಿಗೂ ಅಂಜುವವರಲ್ಲ, ಹೀಗಾಗಿಯೇ ಅವರನ್ನು ಘಟ್ಟಿಗ, ತುಂಟ, ಎಂದು ಕರೆಯುತ್ತಿದ್ದರು. ಇದಕ್ಕೆ ಸಾಕ್ಷಿಯಾಗಿ ರಾಯರು ಹೈಸ್ಕೂಲ್‌ನಲ್ಲಿ ಸರಿಯಾಗಿ ನಡೆದುಕೊಳ್ಳಲಿಲ್ಲ ಎಂದು ಉಪಧ್ಯಾಯರು ಇವರನ್ನು ದಂಡಿಸಿ, ಕೆಟ್ಟಮಾತಿನಿಂದ ಬೈದು, ಬೆಂಚಿನ ಮೇಲೆ ನಿಲ್ಲುವಂತೆ ಹೇಳಿದರು. ಆಗ ರಾಯರು ತಾನೂ ತಪ್ಪು ಮಾಡಿಲ್ಲ ನಿಲ್ಲುವುದಿಲ್ಲವೆಂದು ಹಠಹಿಡಿದರು. ಕೋಪಗೊಂಡ ಉಪಧ್ಯಾಯರು ರಾಯರಿಗೆ ಹೊಡೆಯಲು ಹೋದಾಗ ರಾಯರೇ ಅವರನ್ನು ಹೊಡೆದರಂತೆ. ಈ ಘಟನೆಯ ಪರಿಣಾಮವಾಗಿ ರಾಯರು ಆ ವರ್ಷದ ನಡು ಹಂತದಲ್ಲಿಯೇ ಶಾಲೆಯಿಂದ ಹೊರಹಾಕಲ್ಪಟ್ಟರು. ಲಂಡನ್ ಮಿಷನ್ ಹೈಸ್ಕೂಲ್‌ನ ಪ್ರಿನ್ಸಿಪಾಲರಾದ, ವಾಲ್ಬನ್ ಸಾಹೇಬರ ಮುಂದೆ ನಡೆದಿದ್ದನ್ನು ವಿವರಿಸಿದಾಗ ವಾಲ್ಬನ್ ಸಾಹೇಬರು ಉಪಧ್ಯಾಯರ ಸ್ವಭಾವದಿಂದಾಗಿರಬೇಕು ಎಂದು ತಿಳಿದು ಶಾಲೆಗೆ ಪ್ರವೇಶ ನೀಡಿದರು. ಮೆಟ್ರಿಕ್ಯುಲೇಷನ್ ಪರೀಕ್ಷೆಯಲ್ಲಿ ತೇರ್ಗಡೆಯಾದ ರಾಯರು ಎಫ್.ಎ.ಕ್ಲಾಸಿಗೆ ಸೇರಲು ಹಿಂದಿನ ಸೆಂಟ್ರಲ್ ಕಾಲೇಜ್‌ಗೆ ಹೋದರು. ಎರಡು ವರ್ಷಗಳ ಹಿಂದೆ ದುಷ್ಟ ನೆನಿಸಿಕೊಂಡ ರಾಯರ ವಿರುದ್ಧ ಯಾರು ಅಡ್ಡಿಯನ್ನು ಪಡಿಸಲಿಲ್ಲ, ಅದೇ ಕಾಲೇಜಿನಲ್ಲಿ ನಾಲ್ಕು ವರ್ಷ ವ್ಯಾಸಂಗ ಮಾಡಿದರು. ರಾಯರು ಚಿಕ್ಕವಯಸ್ಸಿನಲ್ಲಿ ಆತ್ಮವಿಶ್ವಾಸ ಬೆಳೆಸಿಕೊಂಡವರು ಮೇಲಾಗಿ ನಿಷ್ಠುರ ವ್ಯಕ್ತಿತ್ವ ಉಳ್ಳವರಾಗಿದ್ದರು.

ಕಾಲೇಜ್ ದಿನಗಳಲ್ಲಿ ರಾಮರಾಯರಿಗೆ ಸೋದರ ಮಾವಂದಿರಿಂದ ಮದುವೆಯ ಪ್ರಸ್ತಾಪ ಬಂದಿತ್ತು. ರಾಯರ ಕಾಲಕ್ಕೆ ಕಾಲೇಜ್ ದಿನಗಳಲ್ಲಿ ಮದುವೆ ಮಾಡುವುದು ಸಾಮಾನ್ಯವಾಗಿತ್ತು. ರಾಯರನ್ನು ಸಾಕಿ ಸಲುಹಿದ ಆನಂದತೀರ್ಥರು ಮತ್ತು ಪ್ರಹ್ಲಾದರಾಯರಿಬ್ಬರಿಗೂ ಹೆಣ್ಣು ಮಕ್ಕಳಿದ್ದೂ ರಾಯರನ್ನು

ಅಳಿಯನನ್ನಾಗಿ ಮಾಡಿಕೊಳ್ಳುವ ಉದ್ದೇಶವು ಇಬ್ಬರು ಸಹೋದರರಲ್ಲಿತ್ತು. ಇದರಿಂದಾಗಿ ರಾಯರ ಮದುವೆಯು ಬಿಕ್ಕಟ್ಟಿಗೆ ಸಿಲುಕ್ಕಿತ್ತು. ಸಂಸಾರಗಳಲ್ಲಿ ವಿರಸ ಮೂಡುವ ಸಂದರ್ಭ ಬಂದೊದಗಿತು. ರಾಯರ ತಂದೆಯವರು ಚೀಟಿ ಎತ್ತುವ ಮೂಲಕ ಆನಂದ ತೀರ್ಥರ ಮಗಳಾದ 'ಕಾಶೀಜ ಬಾಯಿ' ಅವರನ್ನು ಮದುವೆಯಾದರು. ರಾಯರ ಸಾಕಿದ ಮಾವಂದಿರಿಗೆ ಕೃತಘ್ನತೆ ಸಲ್ಲಿಸುವ ಮನೋಭಾವದಿಂದಾಗಿ ಎದುರು ಮಾತಾಡದೇ ಮದುವೆಯಾದರು.

ಕಾಲೇಜ್ ಓದುವ ದಿನಗಳಲ್ಲಿ ಇಂಗ್ಲೀಷ್ ಭಾಷೆಯ ಮೇಲಿನ ಪ್ರೀತಿಯಿಂದಾಗಿ ಕನ್ನಡವು ಅವರಿಗೆ ರುಚಿಸಲಿಲ್ಲ. ಕನ್ನಡದ ತರಗತಿಗಳಿಗೆ ಚಕ್ಕರು ಹಾಕುವುದು ಮಾಮೂಲಿಯಾಗಿರಿಸಿಕೊಂಡಿದ್ದರು. ರಾಯರಲ್ಲಿ ಇಂಗ್ಲೀಷ್ ಭಾಷೆಯಲ್ಲಿನ ಹಿಡಿತ ಗಾಢವಾಗಿತ್ತು. ಪಾಶ್ಚಾತ್ಯರು ಇವರ ಪಾಂಡಿತ್ಯಕ್ಕೆ ಮೆಚ್ಚುಗೆ ವ್ಯಕ್ತಪಡಿಸಬೇಕೆಂಬ ಆಸೆ ಇವರಲ್ಲಿ ಮನೆಮಾಡಿತ್ತು. ಇಂತಹ ವ್ಯಕ್ತಿತ್ವದ ರಾಯರು ಕನ್ನಡಕ್ಕೆ ವಾಲಿಕೊಂಡಿದ್ದು ಇವರಲ್ಲಿನ ವಿಶೇಷತೆಯಾಗಿದ್ದು, ಸಾಹಿತ್ಯಕ್ಕೆ ಗುರುತರವಾದ ಕೊಡುಗೆ ನೀಡಲು ಸಾಧ್ಯವಾಯಿತು. ಕಾಲೇಜ್ ದಿನಗಳಲ್ಲಿಯೇ ಜೀವನದ ಭಾಗ್ಯವೆಂದು ಭಾವಿಸುತ್ತಿದ್ದ ಇಂಗ್ಲೀಷ್ ಪ್ರಾಧ್ಯಾಪಕರಾದ ಶ್ರೀ ಟೇಟ್ ಸಾಹೇಬರು ಮತ್ತು ಈ ಕಾಲೇಜಿನಲ್ಲಿ ಓದುತ್ತಿದ್ದ ಶ್ರೀ ಚಕ್ರವರ್ತಿ ರಾಜಗೋಪಾಲಾಚಾರ್ಯರ ಪರಿಚಯವಾಗಿ ಗಾಢ ಸ್ನೇಹ ಬೆಳೆಯಿತು. ರಾಯರು ಕ್ರಿಕೇಟನ್ನು ಚೆನ್ನಾಗಿ ಆಡುತ್ತಿದ್ದವರು, ಇಂಗ್ಲೀಷ್‌ನಲ್ಲಿ ಘಟ್ಟಿಗರು, ಗರಡಿ ಮನೆಯಲ್ಲಿ ವ್ಯಾಯಾಮ ಮಾಡುತ್ತಿದ್ದವರು. ಸ್ಫುರದ್ರೂಪಿ ಯುವಕನಾಗಿದ್ದ. ಕಾಲೇಜಿನ ಕಲ್ಚರ್ ಡಿರ್ಪಾಟ್‌ಮೆಂಟಿಗೆ ಕೀರ್ತಿ ತರುವಂತಹ ಜಾಣ್ಮೆ, ಇವನಲ್ಲಿ ಮೈಗೂಡಿತ್ತು ಬ್ರಾಹ್ಮಣ ಮನೆತನದ ರಾಯರು ಗರಡಿ ಮನೆಯಲ್ಲಿ ವ್ಯಾಯಾಮ ಮಾಡುತ್ತಿದರಿಂದ ದೇಹವನ್ನು ಅಚ್ಚುಕಟ್ಟಾಗಿಟ್ಟಿದ್ದರು. ಪಾಶ್ಚಾತ್ಯರ ಜೊತೆಗಿನ ಒಡನಾಟ, ಇವರಲ್ಲಿನ ಮೊಂಡುತನವು ಬ್ರಾಹ್ಮಣರಲ್ಲಿ ವಿರೋಧಿಯಾಗಿದ್ದವು. ರಾಯರು ಯುವಕರಾಗಿದ್ದಾಗಲೇ ಇಂತಹ ಮಡಿವಂತಿಕೆಯ ವಿರೊಧವಾಗಿರುವುದು ತಿಳಿದುಬರುತ್ತದೆ.

ರಾಮರಾಯರು ಟೇಟ್‌ಸಾಹೇಬರು ಗುರು ಶಿಷ್ಯರಾಗಿದ್ದರು. ರಾಯರು ವ್ಯಕ್ತಿತ್ವದಿಂದಾಗಿ ಸ್ನೇಹಿತರಂತೆಯಿದ್ದ ಟೇಟ್ ಸಾಹೇಬರಿಗೆ ಈಜುವುದು ಬಹಳ ಇಷ್ಟವಾಗಿತ್ತು, ರಾಯರ ಜೊತೆಗೂಡಿ ಕಂಡ ಕಂಡ ಕೆರೆಗಳಲ್ಲಿ ಈಜುವುದು ಮಾಮೂಲಿಯಾಗಿತ್ತು, ಪ್ರತಿಭಾವಂತರಾದ ರಾಯರು ಸಹಜವಾಗಿಯೇ ಟೇಟ್ ಸಾಹೇಬರಿಗೆ 'ಪೆಟ್ ಸ್ಟೂಡೆಂಡ್' ಆಗಿದ್ದರು. ಕಾಲೇಜಿನ ವ್ಯಾಸಂಗದ ಕೊನೆಯ ದಿನಗಳಲ್ಲಿ ಸಾಹೇಬರಿಗೆ ಶಿಷ್ಯರಿಗಿಂತ ಹೆಚ್ಚು ಮಿತ್ರನಂತಾದ್ದು ರಾಯರಲ್ಲಿನ ವ್ಯಕ್ತಿತ್ವದ ನಿದರ್ಶನವಾಗಿದೆ.

ರಾಮರಾಯರು ಸ್ವಾಭಿಮಾನವುಳ್ಳ ವ್ಯಕ್ತಿ. ಅಷ್ಟೇ ನಿಷ್ಠುರವಾದ ವ್ಯಕ್ತಿತ್ವ. ಇವರ ಗೌರವಕ್ಕೆ ದಕ್ಕೆ ಬಂದಾಗ ಯಾರಾದರೂ ಸರಿ ಬಿಡುವವರಲ್ಲ. ಒಮ್ಮೆ ತರಗತಿಯಲ್ಲಿ ವಿದ್ಯಾರ್ಥಿಯೊಬ್ಬನಿಗೆ ತುರಿಕೆ ಬಂದಾಗ, ಟೇಟ್ ಸಾಹೇಬರು ಗಮನಿಸಿ 'You Indians are dirty fellows' ಎಂದರಂತೆ, ರಾಯರಿಗೆ

ಅವಮಾನವೆನಿಸಿ Don't your People ever suffer from itches? Ans: No 'then what is the thing that is called the Scotch fiddle (ತುರಿ)? ಎಂದು ಪ್ರತಿಭಟಿಸುವ ಹಾಗೆ ಕೇಳಿದವರು, ಟೇಟ್ ಸಾಹೇಬರು ನಗೆ ಭರಿತ ಕೋಪದಿಂದ ಜಾರಿಕೊಂಡರು, ಮತ್ತೊಂದು ತರಗತಿಯಲ್ಲಿ ಉಪಾಧ್ಯಾಯರು ಷೇಕ್ಸ್‌ಪಿಯರ್‌ನ ಪಾಠ ಹೇಳುವ ವೇಳೆ 'ಟ್ರೂಯಿಲಸ್ ಮತ್ತು ಕ್ರಿಸಿಡಾ' ನಾಟಕದಲ್ಲಿ 'Higher in self esteem then in the note of Judgement' ಎಂಬ ವಿವರಣೆ. ಒಂದರ್ಥದಲ್ಲಿ ವಿವರಿಸಿದಾಗ ರಾಯರು ಅರ್ಥಹೀಗಿರಬಹುದಲ್ಲವೇ? ಎಂದು ತರ್ಕ ಮಾಡುತ್ತಿದ್ದವರು. ರಾಯರು ಪಾಶ್ಚಾತ್ಯರು ತನ್ನ ಪಾಂಡಿತ್ಯವನ್ನು ಕುರಿತು ಮೆಚ್ಚಿಗೆ ವ್ಯಕ್ತಪಡಿಸಬೇಕೆಂಬ ಹಂಬಲ, ಜೊತೆಗೆ ಅವರ ಸ್ವಾಭಿಮಾನಕ್ಕೆ ಧಕ್ಕೆ ಬಂದಾಗ ಅವರನ್ನೇ ಪ್ರತಿಭಟಿಸುತ್ತಿದ್ದರು. ರಾಯರು ಪಾಶ್ಚಾತ್ಯ ಶಿಕ್ಷಣ ನೀತಿಯನ್ನು ಮೆಚ್ಚಿದ್ದರು. ಆದರೆ ರಾಜಕೀಯ ನೀತಿಯನ್ನು ಮಾತ್ರ ಪ್ರತಿಭಟಿಸುತ್ತಿದ್ದವರು. ಭಾರತಕ್ಕೆ ಶಿಕ್ಷಣವನ್ನು ಜಾಗೃತಗೊಳಿಸಿದ ರೀತಿಯು ಸಹಜವಾಗಿಯೇ ಎಲ್ಲರನ್ನು ಆಕರ್ಷಿಸಿದ್ದು ವಿಶೇಷವೆನಿಸುತ್ತದೆ.

ಕಾಲೇಜ್ ವ್ಯಾಸಾಂಗದ ಕೊನೆಯ ವರ್ಷದಲ್ಲಿ ಮಲತಾಯಿಯ ವಿರೋಧದಿಂದಾಗಿ, ಹೆಂಡತಿಯೊಡನೆ ರಾಯರು ಮನೆಯಿಂದ ಹೊರ ನಡೆಯಬೇಕಾಗಿ ಬಂತು. ಏಕಾಏಕಿಯಾಗಿ ಹೊರಬಂದ ರಾಯರು ಹೆಂಡತಿಯನ್ನು ತವರು ಮನೆಗೆ ಕಳುಹಿಸುವುದು ಇಷ್ಟವಿರಲಿಲ್ಲ, ಮಲ್ಲೇಶ್ವರಂನಲ್ಲಿ ಸಣ್ಣದೊಂದು ಮನೆಯನ್ನು ಬಾಡಿಗೆ ತೆಗೆದುಕೊಂಡು ಅಲ್ಲಿಯೇ ನೆಲೆನಿಂತರು, ವಿದ್ಯಾಭ್ಯಾಸ ಮತ್ತು ಸಂಸಾರಗಳೆರೆಡನ್ನು ಸರಿದೂಗಿಸುವುದು ಕಷ್ಟವಾಯಿತು. ರಾಯರ ಪರಿಸ್ಥಿತಿ ಅರಿತ ಟೇಟ್ ಸಾಹೇಬರು ಹಣ ನೀಡಲು ಮುಂದಾದರು. ಸ್ವಾಭಿಮಾನಿಯಾದ ರಾಯರು ನಾನು ನಿಮ್ಮಿಂದ ಬಿಟ್ಟಿ ಹಣವನ್ನು ತೆಗೆದುಕೊಳ್ಳಲಾರೆ' ಎಂದು ತಿರಸ್ಕರಿಸಿದರು. ಸರಿಯಾದ ಮಾತು ಎಂದು ಪ್ರಶಂಸಿದ ಸಾಹೇಬರು 'ನನಗೆ ಕನ್ನಡ ಪಾಠ ಹೇಳಿಕೊಡು, ನಾನು ನಿನಗೆ ಹಣ ನೀಡುತ್ತೇನೆ' ಎಂದು ಹೇಳಿ ಒಪ್ಪಿಸಿದರು. ಇದರ ಪ್ರತಿಫಲವಾಗಿ ಬಂದ ಇಪ್ಪತ್ತು ರೂಪಾಯಿ ಹಣವು ಸಂಸಾರದ ಭಾರವನ್ನು ಕಡಿಮೆಗೊಳಿಸಿತ್ತು. ಒಮ್ಮೆ ರಾಯರ ಮಗಳಿಗೆ ಜ್ವರ ಬಂದು ನರಳುತ್ತಿರುವಾಗ ರಾಯರಲ್ಲಿ ಹಣವಿರಲಿಲ್ಲ, ಟೇಟ್‌ಸಾಹೇಬರು ಡಾಕ್ಟರ್‌ನ್ನು ಕರೆದುಕೊಂಡು ಬಂದು ಚಿಕಿತ್ಸೆ ಕೊಡಿಸಿ ರಾಯರಿಗೆ ಬಲವಂತವಾಗಿ ಹಣವನ್ನು ನೀಡಿದ್ದರು. ರಾಯರು ಮಾಸ್ತಿಯವರಲ್ಲಿ ಅನೇಕ ಸಾರಿ 'ಟೇಟ್ ಸಾಹೇಬರು ನನಗೆ ದೇವರಿಗೆ ಸಮಾನ' ಎಂದು ಹೇಳಿಕೊಂಡಿದ್ದರು. ಗುರುಶಿಷ್ಯರ ಈ ಗಾಢ ಸಂಬಂಧವು ಕೊನೆಯವರೆಗೂ ಮುಂದುವರೆದಿತ್ತು, ಗುರುವನ್ನೇ ಶಿಷ್ಯರನ್ನಾಗಿ ಮಾಡಿಕೊಂಡಿದ್ದು ರಾಯರಲ್ಲಿನ ಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ.

ರಾಮರಾಯರು ಬಿ.ಎ. ತರಗತಿಯಲ್ಲಿ ತೇರ್ಗಡೆಯಾದರು. ಅವರಿಗೆ ವಕೀಲ ವೃತ್ತಿ ಮಾಡುವ ಉದ್ದೇಶದಿಂದ ಬಿ.ಎಲ್, ಓದುವುದಕ್ಕಾಗಿ ಮದ್ರಾಸ್‌ಗೆ ಹೋದರು. ಆಗಾಗಲೇ ರಾಜಾಜಿಯವರು ಬಿ.ಎಲ್.ನಲ್ಲಿ ಒಂದು ವರ್ಷದ ವ್ಯಾಸಂಗ ಕಾರಣವಾಯಿತು. ಇವರಿಬ್ಬರು ಬ್ರಿಟೀಷರ ಶಿಕ್ಷಣ ನೀತಿಯನ್ನು

ಇಷ್ಟಪಡುತ್ತಿದ್ದರು. ರಾಜಾಜಿಯವರು ಕಾಂಗ್ರೆಸಿಗರು ಬ್ರಿಟೀಷ್ ಸರ್ಕಾರದ ವಿರುದ್ಧ ನಿಲ್ಲುವಂತರಾಗಿದ್ದರು. ರಾಯರು ಈ ಸರ್ಕಾರದಲ್ಲಿ ಉನ್ನತ ಹುದ್ದೆ ಬಯಸುವರಾಗಿದ್ದರು, ಎರಡೂ ಭಿನ್ನವಾದ ಮನಸ್ಸು ಉಳ್ಳವರಾಗಿದ್ದರೂ ಇವರಿಬ್ಬರ ಸ್ನೇಹಕ್ಕೆ ಅಡ್ಡಿಯಾಗಿರಲಿಲ್ಲ, ರಾಯರು ಪಾಶ್ಚಾತ್ಯರ ಚತುರತೆ ಮೆಚ್ಚಿಗೆಯಾಗಿತ್ತೇ ವಿನಃ ಅವರ ರಾಜಕೀಯವನ್ನು ಬಹುವಾಗಿಯೇ ವಿರೋಧಿಸುವರಾಗಿದ್ದರು.

ಕಾಲೇಜಿನಲ್ಲಿ ಶ್ರೀ.ಟಿ.ವಿಜಯರಾಘವಾಚಾರ್, ಶ್ರೀ.ವಿ.ಟಿ.ಕೃಷ್ಣಮಾಚಾರ್, ಶ್ರೀ.ಬಿ.ಕೃಷ್ಣಮಾಚಾರ್ ರವರು ರಾಜಾಜಿಯವರಷ್ಟು ನಿಕಟ ಸ್ನೇಹ ಅಲ್ಲದಿದ್ದರೂ ಗೌರವಯುಕ್ತ ಗಾಢ ಮಿತ್ರಾಭಿಮಾನವಿತ್ತು. ಇಂತಹ ಸ್ನೇಹಗಳನ್ನು ಗಳಿಸುವುದು, ಅವರನ್ನು ಕೊನೆಯವರೆಗೂ ಉಳಿಸಿಕೊಳ್ಳುವುದು, ಅವರ ಸ್ವಭಾವದ ವಿಶಿಷ್ಟಗುಣವಾಗಿತ್ತು. ರಾಯರಿಗೆ ಹಣದ ಅವಶ್ಯಕತೆವಿದ್ದಿರಬಹುದೊ, ಏನೊ? ಹೋಟಲ್‌ವೊಂದರಲ್ಲಿ ಸ್ನೇಹಿತರೊಡನೆ ನಲವತ್ತು ವಡೆಗಳನ್ನು ತಿನ್ನುವುದಾಗಿ ಪಂದ್ಯವನ್ನು ಕಟ್ಟಿದ್ದರು. ಪಂದ್ಯದ ಪ್ರಕಾರ ನಲವತ್ತು ವಡೆಯನ್ನು ತಿಂದು ಪಂದ್ಯದಲ್ಲಿ ಕಟ್ಟಿದ ಸ್ವಲ್ಪ ಹಣವನ್ನು ಪಡೆದರು. ಕಾಲೇಜ್ ದಿನಗಳಲ್ಲಿ ವಿದ್ಯಾಭ್ಯಾಸದ ಖರ್ಚಿಗಾಗಿ ಹಣದ ಅವಶ್ಯಕತೆಯಿತ್ತು. ರಾಯರು ಸ್ವಾಭಿಮಾನ ಉಳ್ಳವರು. ಯಾರನ್ನು ಕೇಳುತ್ತಿರಲಿಲ್ಲ. ರಾಜಾಜಿಯವರು ಕೆಲವೊಮ್ಮೆ ಸಹಾಯ ಮಾಡಿದ್ದುಂಟು. ಇಂಗ್ಲೀಷ್‌ನಲ್ಲಿ ಪಾಂಡಿತ್ಯ ಹೊಂದಿದ್ದ ರಾಯರು "ಮದ್ರಾಸ್ ಟೈಮ್ಸ್" ಪತ್ರಿಕೆಗೆ ಲೇಖನಗಳನ್ನು ಬರೆಯುತ್ತಿದ್ದರು. ಇದರಿಂದಾಗಿ ಬಂದ ಹಣವು ವಿದ್ಯಾಭ್ಯಾಸದ ವೆಚ್ಚಕ್ಕಾಗಿ ಬಳಸುತ್ತಿದ್ದರು. ಮದ್ರಾಸ್‌ನಲ್ಲಿರುವಾಗ ಸಂಗೀತಾಭ್ಯಾಸದ ಹುಚ್ಚು ರಾಯರಿಗೆ ಬಹಳವಿತ್ತು. ತಮ್ಮ ರೂಮ್‌ನಲ್ಲಿ ಜೋರಾಗಿ ಹಾಡುತ್ತಿದ್ದರು. ರಾಯರು ಗಟ್ಟಿಮಾಡಿ ಧ್ವನಿ ಹಾಡುತ್ತಿದ್ದಾಗಲಂತೂ ಸ್ನೇಹಿತರ ವಿರೋಧ ವ್ಯಕ್ತವಾಗುತಿತ್ತು. ಕೆಲವೊಮ್ಮೆ ಸ್ನೇಹಿತರೇ ರಾಯರ ಸಂಗೀತ ಕೇಳಿ ರೂಮ್‌ನಿಂದ ಹೊರಹೋಗುತ್ತಿದ್ದು ನಂತರದಲ್ಲಿ ಬರುತ್ತಿದ್ದರು. ಹರಮಾರಿಯಾದ ರಾಯರ ಈ ಅಭ್ಯಾಸ ಸ್ನೇಹಿತರಿಗೆ ಹಾಸ್ಯವಾಗಿ ಕಂಡಿತು. ರಾಯರು ತಮ್ಮ ಧ್ವನಿಯ ಮರ್ಮವರಿತೋ ಏನೊ ಹಾಡುವುದನ್ನು ನಿಲ್ಲಿಸಿಯೆ ಬಿಟ್ಟರು. ಸ್ನೇಹಿತರಲ್ಲಿ ಗಾಢ ಸಂಬಂಧದಿಂದ ಯಾರಲ್ಲೂ ಬೇಸರ ತರದ ವ್ಯಕ್ತಿತ್ವ ಇವರದಾಗಿತ್ತು.

ರಾಯರಿಗೆ ಕಮೀಷನರ್ ಹುದ್ದೆ ಪಡೆಯುವುದು ಮಹತ್ವಕಾಂಕ್ಷೆಯಾಗಿತ್ತು. ಹಾಗಾಗಿ ಮೈಸೂರು ಸಿವಿಲ್ ಸರ್ವಿಸ್ ಪರೀಕ್ಷೆಯನ್ನು ತೆಗೆದುಕೊಂಡರು. ಪರೀಕ್ಷೆಗೆ ಇಂಗ್ಲೀಷ್ ಅವಶ್ಯಕ ಭಾಷೆಯಾಗಿತ್ತು. ಇದಕ್ಕೆ ಬ್ರಿಟೀಷ್ ಸರ್ಕಾರದ ಕಾರಣವೂ ಒಂದು. ಐಚ್ಛಿಕ ವಿಷಯವಾಗಿ ಇವರು ಓದಿದ ಫಿಸಿಕ್ಸ್‌ನ ಬದಲಾಗಿ ಅಂಕಗಳನ್ನು ಪಡೆಯುವ ಉದ್ದೇಶದಿಂದ 'ಅರ್ಥಶಾಸ್ತ್ರ'ವನ್ನು ತೆಗೆದುಕೊಂಡರು. ಇವರಿಗೆ ತೊಂಬತ್ತು ಅಂಕಗಳು ಪಡೆದು ಉತ್ತೀರ್ಣರಾದರೂ ಮತ್ತೊಬ್ಬ ತೊಂಬತ್ತೊಂದು ಅಂಕ ಪಡೆದಿದ್ದರಿಂದ ರಾಯರು ಸ್ಥಾನವಂಚಿತರಾದರು, ಇವರಲ್ಲಿ ಅರ್ಥಶಾಸ್ತ್ರದಲ್ಲಿ ಲಘುಭಾವನೆ ಹೊಂದಿದ್ದರಿಂದ ಅಂಕಗಳು ಕಡಿಮೆ ಬಂದಿರಬಹುದಾಗಿದೆ. ಅಥವಾ ಪಿಸಿಕ್ಸ್ ಭಾಷೆಯಲ್ಲಿ ಅಂಕಗಳು ಪಡೆಯುವುದು ಇವರಿಗೆ

ಕಷ್ಟವೆನಿಸಿ ತಿರಸ್ಕರಿಸಿದ್ದು ಸ್ಥಾನವಂಚಿತರಾಗಲು ಕಾರಣವಾಗಿರಬಹುದಾಗಿದೆ. ರಾಯರಿಗೆ ಮತ್ತೆ ಈ ಪರೀಕ್ಷೆಯಲ್ಲಿ ವಯಸ್ಸಿನ ಅಂತರದಿಂದಾಗಿ ಕೂರುವ ಅವಕಾಶ ಸಿಗಲಿಲ್ಲ.

ರಾಮರಾಯರು ಕಾನೂನು ಪದವಿಯನ್ನು ಪಡೆದು ತಮ್ಮ ಜಿಲ್ಲೆಯ ಮುಖ್ಯಪಟ್ಟಣವಾದ ಶಾಲ್ಯದಲ್ಲಿ ವಕೀಲ ವೃತ್ತಿ ಮಾಡುವ ಇಚ್ಛೆ ಹೊಂದಿದ್ದರು. ರಾಜಾಜಿಯವರು ಇದೇ ಪಟ್ಟಣದಲ್ಲಿ ಲಾಯರ್ ವೃತ್ತಿಯಲ್ಲಿರುವುದು ಅವರ ಜೊತೆಗೆ ಇರಬೇಕೆಂಬ ಆಸೆಯೂ ಕಾರಣವಾಗಿರಬಹುದು. ವಕೀಲ ವೃತ್ತಿಯಲ್ಲಿ ನೆಲೆಯೂರುವುದಕ್ಕೂ ಮೊದಲೇ ತಂದೆ ಬಾಲಕೃಷ್ಣರಾಯರು ದಿವಾನ್ ಶ್ರೀ ಪಿ.ಎನ್.ಕೃಷ್ಣಮೂರ್ತಿಯರವರಲ್ಲಿ ತಮ್ಮ ಮಗನ ವಿಷಯ ತಿಳಿಸಿ ಪ್ರೊಬೇಷನರ್ ಕೆಲಸ ದೊರೆಯಲು ಏರ್ಪಾಡು ಮಾಡಿದರು. ರಾಯರಿಗೆ ಈ ಹುದ್ದೆ ಇಷ್ಟವಿರದಿದ್ದರೂ ಕಮೀಷನರ್ ಹುದ್ದೆಗೆ ಬಡ್ತಿ ಸಿಗಬಹುದೆಂಬ ಆಸೆಯಿಂದಲೋ ಒಪ್ಪಿಕೊಂಡರು. ಈ ಸಂದರ್ಭದಲ್ಲಿ ನಡೆದ ಘಟನೆಯನ್ನು ರಾಮರಾಯರು ತಮ್ಮ 'ಕೆಲವು ನೆನಪುಗಳು' ಪುಸ್ತಕದಲ್ಲಿ ವಿವರವಾಗಿ ತಿಳಿಸಿದ್ದಾರೆ. ಪ್ರೊಬೇಷನರ್ ಆಗಿದ್ದ ರಾಮರಾಯರು ಅಮಲ್ದಾರರಾಗಿ ಎಡೆತೊರೆ, ತಿರುಮಕೊಡಲು, ನರಸೀಪುರ, ತಾಲ್ಲೂಕುಗಳಲ್ಲಿ ದಕ್ಷ ಅಧಿಕಾರಿಯಾಗಿ ಕೆಲಸಮಾಡಿದರು. ರಾಯರ ದಕ್ಷತೆಯಿಂದಾಗಿ 'ಬಹದ್ದೂರ್ ಅಮಲ್ದಾರ್' ಎಂಬ ಬಿರುದನ್ನು ಪಡೆದಿದ್ದರು.

ರಾಮರಾಯರು ಯಾವುದೇ ಉನ್ನತ ಅಧಿಕಾರಿಗಳಿಗಿಂತಲು ಕಡಿಮೆ ವಿದ್ವತ್ತು ಪಡೆದವರಲ್ಲ. ಆದರೆ ರಾಯರ ದುರದುಷ್ಟವೆಂಬಂತೆ ಕೆಳಮಟ್ಟದ ಕೆಲಸಗಳಲ್ಲಿಯೇ ಕಳೆಯಬೇಕಾಯಿತು. ರಾಯರು ತಮ್ಮ ಅಧಿಕಾರಾವಧಿಯಲ್ಲಿ ಮೇಲಿನ ಅಧಿಕಾರಿಗಳ ಜೊತೆಯಲ್ಲಿ ಸ್ವಲ್ಪ ದುಷ್ಟತನದಿಂದಲೇ ನಡೆದುಕೊಂಡಿದ್ದರು, ಹೀಗಾಗಿ ರಾಯರ 'ಕೆಲವು ನೆನಪು'ಗಳಲ್ಲಿ ಅವರ ಸ್ವಭಾವವನ್ನು ತಿಳಿಸುತ್ತದೆ. ಆತ್ಮವಿಶ್ವಾಸಿಯಾಗಿದ್ದ ಮೇಧಾವಿಯೊಬ್ಬರು ನಿಷ್ಠುರರಾಗಿಯೂ, ಗೌರವಸ್ಥರಾಗಿಯೂ, ದಕ್ಷತೆಗೆ ಹೆಸರಾಗಿದ್ದ ಇವರು ನಡೆದುಕೊಂಡ ರೀತಿಯೂ ಸೋಜಿಗವಲ್ಲ, ಈ ರೀತಿಯ ನಡವಳಿಕೆ ಬೇರೆಯವರಿಗೆ ದುಷ್ಟತನವೆಂತಲೂ ಕಂಡಿರುವುದು ಸಹಜವಾಗಿದೆ. ರಾಯರು ತಮ್ಮ ಆತ್ಮಕಥೆಯಲ್ಲಿ ಆಕಾಶವಾಣಿಯಲ್ಲಿ ನೀಡಿದಂತಹ ಕಾರ್ಯಕ್ರಮದಲ್ಲಿ, ಲೇಖನಗಳಲ್ಲಿ ತಮ್ಮನ್ನು ತಾವೇ ವಿಮರ್ಶಿಸಿಕೊಂಡಿರುವುದು ಅವರು ಮೇರು ವ್ಯಕ್ತಿತ್ವದಂತೆ ಕಂಡುಬರುತ್ತಾರೆ.

ಹಲವು ವರ್ಷ ಅಮಲ್ದಾರರಾಗಿದ್ದ ರಾಯರು ನಂತರದಲ್ಲಿ ಸೆಕ್ರೆಟೆರಿಯಟ್ಟಿಗೆ ರಿಜಿಸ್ಟ್ರಾರರಾಗಿ, ಶ್ರೀ ಕಂಠೀರವ ನರಸಿಂಹರಾಜ ಒಡೆಯರ ಮದುವೆಗೆ ಸ್ಪೆಷಲ್ ಡ್ಯೂಟಿ ಆಫಿಸರರಾಗಿಯೂ, ೧೯೧೩ರಲ್ಲಿ ಆಕ್ಟಿಂಗ್ ಆಸಿಸ್ಟಂಟ್ ಕಮೀಷನರಾಗಿ ಪ್ರಮೋಷನ್ ಪಡೆದು ಶಿವಮೊಗ್ಗ ಸಬ್‌ಡಿವಿಜನ್‌ಗೆ ಹೋಗಿದ್ದರು. ರಾಯರಿಗೆ ಈ ವೇಳೆಗಾಗಲೇ ನಾಲ್ವರು ಹೆಣ್ಣು ಮಕ್ಕಳಿದ್ದರು. ಆದರೆ ಶಿವಮೊಗ್ಗದಲ್ಲಿದ್ದಾಗಲೇ ಇವರ ಪತ್ನಿ ಕಾಶೀಜಬಾಯಿ ಕಾಯಿಲೆ ಬಂದು ತೀರಿಕೊಂಡರು.

ಮಧ್ಯವಯಸ್ಕರಾದ ರಾಯರು ಕೆಲವು ಕಾಲದ ನಂತರ ಎರಡನೇ ಮದುವೆಯಾದರು. ರಾಯರ ಎರಡನೇ ಪತ್ನಿ ಬಾದಾಮಿ ಮನೆತನದ ಹೆಣ್ಣು. ಈ ಮದುವೆಗೆ ರಾಯರ ತಂದೆ, ತಾಯಿಗಳು ಬಂದಿರಲಿಲ್ಲ.

ರಾಯರಿಗೆ ನಾಲ್ಕರು ಹೆಣ್ಣು ಮಕ್ಕಳಿದ್ದು, ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗಿದ್ದು ಅವರ ಅಸಮಾಧಾನಕ್ಕೆ ಕಾರಣವೂ ಇದ್ದಿರಬೇಕು. ಮುಂದೆ ಎರಡನೇ ಪತ್ನಿಯೂ ಸಹ ಸಂಸಾರ ಸುಖವನ್ನು ಹೆಚ್ಚು ಅನುಭವಿಸಲಿಲ್ಲ. ಮೂವರು ಗಂಡು ಮಕ್ಕಳನ್ನು ಹೆತ್ತು ೧೯೧೮ರಲ್ಲಿ ತೀರಿಕೊಂಡರು. ರಾಯರು ಅಷ್ಟಕ್ಕೆ ಸುಮ್ಮನಾಗಲಿಲ್ಲ, ದೇಹದ ವೈಪರೀತ್ಯವೋ, ಹೆಣ್ಣಿನ ಸಂಗಡ ಇರುವ ಬಯಕೆಯೋ, ಹಾರೈಕೆಯ ಹಿತದೃಷ್ಟಿಯಿಂದಲೋ ಮೂರನೆಯ ಮದುವೆಯಾಗುವ ಯೋಚನೆ ಮಾಡಿದರು. ಎರಡನೇ ಸಂಬಂಧದ ಬಂಧುಗಳಲ್ಲೇ ಒಬ್ಬ ಹುಡುಗಿಯಸ್ನು ಮದುವೆಯಾಗುವ ಸಂಭವವಿತ್ತು. ಏನೋ ತೊಡಕು ಬಂದು ಆ ಮಾತು ನಿಂತುಹೋಯಿತು. ರಾಯರಿಗೆ ಈ ಹೊತ್ತಿಗೆ ಏಳು ಜನಮಕ್ಕಳಿದ್ದು, ಇಬ್ಬರು ಪತ್ನಿಯರು ತೀರಿಕೊಂಡಿದ್ದರಿಂದ ಇವರ ಮೂರನೇ ಮದುವೆಗೆ ಅಡ್ಡಿಯಾಗಿದ್ದಂತೆ ಕಾಣುತ್ತದೆ.

ರಾಮರಾಯರು ಮತ್ತು ಮಾಸ್ತಿಯವರ ಸ್ನೇಹ ೧೯೧೪ರಿಂದ ರಾಯರ ಕೊನೆಯ ಕಾಲದವರೆಗೂ ಒಡನಾಟವಿತ್ತು. ಇವರಿಬ್ಬರ ಸ್ನೇಹ ಸಾಹಿತ್ಯದ ಮೇಲಿನ ಆಸಕ್ತಿಯಿಂದಲೇ ಆಪ್ತರಾಗಿದ್ದರು ಎನ್ನಬಹುದು. ಮಾಸ್ತಿಯವರು ರಾಯರಲ್ಲಿನ ಸಾಹಿತಿಗಳನ್ನು ಕೆದುಕುವ ಮೂಲಕ ಅವರನ್ನು ಸಾಹಿತ್ಯಾಸಕ್ತರನ್ನಾಗಿ ಮಾಡಿದರು. ಒಮ್ಮೆ ಮಾಸ್ತಿಯವರು ತಾವು ಬರೆದ ಸಣ್ಣಕತೆಗಳನ್ನು ರಾಯರಿಗೆ ಓದಲು ಕೊಟ್ಟರು. "ಇಂದಿರೆಯೋ" ಅಲ್ಲವೋ ಕತೆಯನ್ನು ಓದುತ್ತ ಕಣ್ಣೀರು ಹಾಕಿದರಂತೆ. ರಾಯರ ಜೀವನಕ್ಕೆ ಆ ಕತೆಯು ಹತ್ತಿರವಾಗಿತ್ತು. ಈ ಕತೆಯ ಬರಹಗಾರರು ಯಾರು? ಎಂದು ಕೇಳಿದಾಗ, ಮಾಸ್ತಿಯವರು ತಾವು ಬರೆದಿದ್ದು ಎಂದು ಹೇಳಿಕೊಳ್ಳಲಿಲ್ಲ. ಇಡೀ ಕತೆಗಳನ್ನು ಓದಿದ ರಾಯರು ಈ ಕತೆಗಳಲ್ಲಿನ ಧ್ವನಿಯು ನಿಮ್ಮದೇ ಎಂದು ತಿಳಿಸಿದ್ದರು. ಸಾಹಿತ್ಯದಲ್ಲಿ ಆಳವಾದ ಅಧ್ಯಯನ ಹೊಂದಿದ್ದ ರಾಯರನ್ನು ಸಾಹಿತ್ಯಕ್ಕೆ ಆಸಕ್ತರನ್ನಾಗಿ ಮಾಡಿದ್ದು ಮಾಸ್ತಿಯವರೇ ಎಂದೇಳಬಹುದಾಗಿದೆ. ರಾಯರು ಪಿಟೀಲು ಶಾಮಣ್ಣನವರ ಪರಿಸ್ಥಿತಿ ಹದಗೆಟ್ಟ ಸಂದರ್ಭದಲ್ಲಿ ಶಾಮಣ್ಣನವರಿಗೆ ತಮ್ಮ ಮನೆಯಲ್ಲಿಯೇ ಆಶ್ರಯ ಕಲ್ಪಿಸಿದ್ದರು. ಅವರ ಬದುಕನ್ನು ಹತ್ತಿರದಿಂದ ಕಂಡವರು. ಮಾಸ್ತಿಯವರ ಕಥೆಗಳಲ್ಲಿನ ಶಕ್ತತೆ ಗಮನಿಸಿದ ರಾಯರು ಪಿಟೀಲು ಶಾಮಣ್ಣನವರ ಕತೆಯನ್ನು ಹೇಳಿ ಬರೆಯುವಂತೆ ಸೂಚಿಸಿದ್ದರು. ಮಾಸ್ತಿಯವರು 'ಸುಬ್ಬಣ್ಣ' ಎಂಬುದಾಗಿ ಬರೆದದ್ದು ತುಂಬಾ ಪ್ರಸಿದ್ಧಿ ಪಡೆದಿದೆ.

ಮಾಸ್ತಿಯವರ ಒಡನಾಟದಿಂದಾಗಿ ರಾಯರು ಕತೆ, ಸಣ್ಣಕಥೆ, ಆತ್ಮಕಥೆ, ರಚಿಸಿದ್ದಾರೆ. ಮಾಸ್ತಿಯವರ 'ಚೆನ್ನಬಸವನಾಯಕ' ಕತೆಯನ್ನು ಇಂಗ್ಲೀಷ್‌ಗೆ ಭಾಷಾಂತರ ಮಾಡಿದ್ದರು. ಇಂಗ್ಲೀಷ್ ಭಾಷೆಯ ಮೇಲಿನ ಹಿಡಿತದಿಂದಾಗಿಯೋ ಕೆಲವು ಸಣ್ಣಕಥೆಗಳನ್ನು ಭಾಷಾಂತರಿಸಿದ್ದರು. ಮಗಳ ಸ್ಫೂರ್ತಿಯಿಂದಾಗಿ 'ಲಕ್ಷ್ಮಣರಾಯರ ಭಾಗ್ಯ' ಕತೆಯನ್ನು ಬರೆದರು. ರಾಯರು ಈ ಕತೆಗೆ 'ನರಬಲಿ' ಎಂದು ಹೆಸರಿಟ್ಟಿದ್ದರು. ಆದರೆ ಮಾಸ್ತಿಯವರು 'ಲಕ್ಷ್ಮಣರಾಯನ ಭಾಗ್ಯ' ಎಂಬ ಹೆಸರಿಟ್ಟಿದ್ದು, ಅದು ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ಇದರಿಂದಾಗಿ ರಾಯರನ್ನು ಶ್ರೇಷ್ಠ ಕತೆಗಾರರೆಂದು ಗುರುತಿಸುವಂತಾಯಿತು.

ರಾಯರು ಕತೆ ಬರೆದದ್ದು ಇದೇ ಮೊದಲಲ್ಲ. ಕಾಲೇಜ್ ದಿನಗಳಲ್ಲಿ ಇಂಗ್ಲೀಷನಲ್ಲಿ ಬರೆದಿದ್ದ ಕಾದಂಬರಿಯು "Christian Magazine" ಪತ್ರಿಕೆಯಲ್ಲಿ ಪ್ರಕಟವಾಗಿ ಪ್ರಸಿದ್ಧಿ ಪಡೆದಿದ್ದರು. ಇಂಗ್ಲೀಷ್‌ನಲ್ಲಿ ಹಲವಾರು ಲೇಖನಗಳು ಸಹ ಬರೆದಿದ್ದು ಸಾಹಿತ್ಯದ ಮೇಲಿನ ಕಲ್ಪನೆ ಅವರಿಗೆ ಹೊಸದೇನೂ ಆಗಿರಲಿಲ್ಲ. ಕನ್ನಡದ ಮಟ್ಟಿಗೆ ಮೊದಲ ಕಾಣಿಕೆಯಾಗಿದೆ. ಮಾಸ್ತಿಯವರ ಒತ್ತಾಯದಿಂದಾಗಿ ತಮ್ಮ ವೃತ್ತಿ ಜೀವನದ ಅನುಭವಗಳನ್ನು ಜೀವನ ಪತ್ರಿಕೆಯಲ್ಲಿ ಪ್ರಕಟಿಸಿದ್ದರು. ರಾಯರ ಮೇಲಿನ ಗೌರವದಿಂದಾಗಿ ಮಾಸ್ತಿಯವರು 'ನವರತ್ನರಾಮರಾವ್' ಎಂಬ ಪುಸ್ತಕದಲ್ಲಿ ರಾಯರ ವೈಯಕ್ತಿಕ ಜೀವನದ ಮೇಲೆ ಬೆಳಕು ಬೀರುವಂತಹ ಮಾಹಿತಿಯನ್ನು ನೀಡಿದ್ದಾರೆ.

ರಾಮರಾವ್ ರವರು ಅಪೂರ್ವ ಯಶಸ್ಸನ್ನು ಗಳಿಸಿದ್ದವರು. ಸರಕಾರದ ಕಾರ್ಯದರ್ಶಿಯಾಗಿ ದಕ್ಷ ಅಧಿಕಾರಿ ಎನಿಸಿಕೊಂಡವರು. ೧೯೩೧ರಲ್ಲಿ ದಿವಾನ್ ಮಿರ್ಜಾ ಇಸ್ಮಾಯಿಲ್ ಸಾಹೇಬರ ಜೊತೆಗೂಡಿ ಲಂಡನ್ನಿಗೆ 'ರೌಂಡ್ ಟೇಬಲ್ ಕಾನ್ಫರೆನ್ಸ್'ಗಾಗಿ ಹೋಗಿದ್ದರು. ನಂತರ ಕೈಗಾರಿಕ ಇಲಾಖೆಯ ಡೈರೆಕ್ಟರ್‌ರಾಗಿಯೂ ದಕ್ಷತೆಯನ್ನು ಮೆರೆದವರು. ೧೯೩೪ರಲ್ಲಿ ರಾಮರಾವ್‌ರು ಸರ್ಕಾರದ ಅಧಿಕಾರದಿಂದ ನಿವೃತ್ತರಾಗಿದ್ದರು. ಸರ್ಕಾರದ ಕಾರ್ಯದರ್ಶಿಗಳಾಗಿ, ಇಲಾಖೆಯ ಮುಖ್ಯಾಧಿಕಾರಿಗಳಾಗಿ, ಪ್ರತಿನಿಧಿ ಸಭೆಯ ಅಧಿಕಾರಿಯಾಗಿ, ಶಾಸನ ಸಭೆಯ ಸದಸ್ಯರಾಗಿ, ಕೆಲಸಮಾಡಿದವರು. ಪ್ರತಿಭಾವಂತರಾದ ರಾಯರು ವಿಶಾಲ ಅನುಭವ, ಮಾತಿನ ಚತುರತೆ, ಕ್ಷಿಪ್ರದ ಪ್ರತ್ಯುಕ್ತಿ, ಉತ್ತಮ ವಿಷಯ ವಿಶ್ಲೇಷಣೆ ಅವರ ಧೀರತನದ ಉದಾರ ಮನೋಭಾವದ ಇಂತಹ ಹತ್ತು ಹಲವಾರು ಕಾರಣಗಳಿಂದ ಉನ್ನತ ಹುದ್ದೆ ಪಡೆದು ಯಶಸ್ವಿಯಾದವರು.

ಸರ್ಕಾರಿ ಕೆಲಸದಿಂದ ನಿವೃತ್ತರಾದ ಮೇಲೆ ಹಲವು ಕ್ಷೇತ್ರಗಳಲ್ಲಿ ರಾಜ್ಯಕ್ಕೆ ಸೇವೆ ಸಲ್ಲಿಸಿದರು. ರಾಜ್ಯದ ಚೇಂಬರ್ ಆಫ್ ಕಾಮರ್ಸ್ ಪರವಾಗಿ ಆಯ್ಕೆಗೊಂಡು ಪ್ರತಿನಿಧಿ ಸಭೆಯ ಸದಸ್ಯರಾದರು. ಮಹಾರಾಜರ ಆಹ್ವಾನದ ಮೇರೆಗೆ ಶ್ರೀ ಕಂಠೀರವ ನರಸಿಂಹರಾಜ ಒಡೆಯರ ಭಾಷಣಗಳನ್ನು ಸಂಪಾದಿಸಿ ಅವರನ್ನು ಕುರಿತ ಚರಿತ್ರೆಯೊಂದನ್ನು ಸೇರಿಸಿ ಗ್ರಂಥವನ್ನು ರಾಜರಿಗೆ ಒಪ್ಪಿಸಿದ್ದರು. ಇದರಿಂದಾಗಿ ರಾಯರು ಧನರೂಪದ ಸಂಭಾವನೆಯನ್ನು ಪಡೆದರು. ತಾರುಣ್ಯದಲ್ಲಿಯೇ ರಾಮರಾವ್‌ರವರಿಗೆ "ರಾಜಸೇವಾ ಪ್ರಸಕ್ತ" ಎಂಬ ಬಿರುದನ್ನು ನೀಡಿ ಗೌರವಿಸಿದರು. ಅನಂತರ ಕೇಂದ್ರ ಸರ್ಕಾರದ ರೇಷ್ಮೆ ಬೋರ್ಡಿನಲ್ಲಿ ವೈಸ್ ಚೇರ್‌ಮನ್‌ರಾಗಿದ್ದು ರಾಷ್ಟ್ರಸೇವೆ ಸಲ್ಲಿಸಿದರು. ಬೆಂಗಳೂರು ನಗರದ ಹಲವು ಕಂಪನಿಗಳ ನಿರ್ದೇಶಕರಾಗಿ, ಪ್ರಮುಖ ಕೋ-ಅಪರೇಟಿವ್ ಬ್ಯಾಂಕಿನ ಅಧ್ಯಕ್ಷರಾಗಿ ದುಡಿದರು. ಕೊನೆಯ ಕೆಲವು ವರ್ಷ ಪ್ರೌಢವಿದ್ಯಾಸಂಸ್ಥೆಯಾದ ಆಚಾರ್ಯ ಪಾಠಶಾಲೆಯ ಪ್ರವರ್ತಕ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದರು. ವಿಶಿಷ್ಟ ವ್ಯಕ್ತಿತ್ವದ ರಾಮರಾವ್‌ರನ್ನು ಹಲವು ಹುದ್ದೆಗಳು ಅರಸಿಕೊಂಡು ಬಂದಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ರಾಮರಾವ್ ರವರು ರೇಷ್ಮೆ ಇಲಾಖೆಯ ಸೂಪರಿಂಟೆಂಡೆಂಟ್‌ರಾಗಿ ಮೈಸೂರಿನ ಕಾರ್ಖಾನೆಯ ಯಜಮಾನರಾಗಿದ್ದರು. ಒಬ್ಬ ಅವಿವಾಹಿತೆ ಪ್ರೌಢ ಯುವತಿ ಕೆಲಸಕ್ಕೆ ಬರುತ್ತಿದ್ದಳು. ಹಲವು ವರ್ಷಗಳಿಂದ ಒಬ್ಬಂಟಿಯಾಗಿದ್ದ ರಾಯರದು ದೃಢವಾದ ದೇಹ, ಸ್ವಭಾವ, ದೇಹದ ಪ್ರವೃತ್ತಿಗಳು,ಯುವತಿಯ ರಾಯರು ಒಲಿದಿರಬೇಕು. ಮದುವೆ ಆಗಿರಲಿಲ್ಲ ಎಂಬುದನ್ನು ಬಿಟ್ಟರೆ, ಜೀವನವೂ ಪರಿಶುದ್ಧ ದಾಂಪತ್ಯವಾಗಿಯೇ ನಡೆದಿತ್ತು. ಕೆಲವು ವರ್ಷಗಳ ನಂತರ ರಾಯರು ಈ ಮದುವೆಯನ್ನು ರಿಜಿಸ್ಟರ್ ಮಾಡಿಸಿದ್ದು. ಆ ವೇಳೆಗೆ ಈ ಸಂಬಂಧದಿಂದಾಗಿ ಇವರಿಗೆ ನಾಲ್ಕು ಮಕ್ಕಳಾಗಿದ್ದವು. ಒಲಿದ ಹೆಣ್ಣಿನ ಗೌರವ, ಪಡೆದ ಮಕ್ಕಳ ಸ್ಥಾನ, ಇವುಗಳ ದೃಷ್ಟಿಕೋನ ಅವಶ್ಯಕವೆಂದು ತಿಳಿದು ಈ ನಿರ್ಧಾರವನ್ನು ಕೈಗೊಂಡಿರಬೇಕು ಎನ್ನಿಸುತ್ತದೆ. ಆಗಾಗಲೇ ನಾಲ್ಕು ಜನ ಹೆಣ್ಣು ಮಕ್ಕಳು ಮದುವೆಯಾಗಿ ಅವರವರ ಮನೆಯಲ್ಲಿ ಸುಖವಾಗಿದ್ದರು. ಮೂವರು ಗಂಡು ಮಕ್ಕಳಲ್ಲಿ ಒಬ್ಬನು ತೀರಿಕೊಂಡನು. ಇಬ್ಬರು ಉದ್ಯೋಗದಲ್ಲಿದ್ದರು, ರಾಮರಾವ್‌ರನ್ನು ನೋಡಿಕೊಳ್ಳದೇ ಇರುವಾಗ ಪುಟ್ಟವ್ವನವರ ಮದುವೆಯಿಂದಾಗಿ ಎರಡು ಗಂಡು ಎರಡು ಹೆಣ್ಣು ಮಕ್ಕಳಾದವು, ರಾಮರಾವ್ ರವರ ಕೊನೆಯ (ಬದುಕನ್ನು) ದಿನಗಳನ್ನು ಹಸನಾಗಿ ಮಾಡಿದವರು ಪುಟ್ಟವ್ವನವರು.

ನಿವೃತ್ತರಾಗಿದ್ದ ರಾಯರು ಸಂಜೆ ಹೊತ್ತು ಕಳೆಯಲೆಂದೇ ಮಾಸ್ತಿಯವರೊಡನೆ ಕೂಡಿ ಬಸವನಗುಡಿಯ 'ಯೂನಿಯನ್ ಸರ್ವಿಸ್ ಕ್ಲಬ್'ನ್ನು ಸೇರಿ, ಇಬ್ಬರೂ ಕೂಡಿ ಹರಟೆ ಹೊಡಿಯುತ್ತಿದ್ದರು. ರಾಯರು ಯಾವ ಸಂಸ್ಥೆಗೂ ಭೂಷಣವಾಗುವಂಥ ವ್ಯಕ್ತಿತ್ವ ಹೊಂದಿದ್ದರು. ಕ್ಲಬ್ಬಿನ ಸದಸ್ಯರು ಇವರನ್ನು ಕಾರ್ಯನಿರ್ವಹಕ ಸಮಿತಿಯ ಸದಸ್ಯರಾಗಿ ಮಾಡಿದ್ದರು. ಆ ಕ್ಲಬ್ಬಿನ ಹಾಲ್‌ನಲ್ಲಿಯೇ ಅವರ ಭಾವಚಿತ್ರವೊಂದನ್ನು ಅನಾವರಣ ಮಾಡಿದರು.

ರಾಮರಾವ್ ರವರು ಅಧಿಕಾರಿ ಜೀವನದ ಹಲವಾರು ಸಂಗತಿಗಳನ್ನು ಮಾಸ್ತಿಯವರಿಗೆ ಹೇಳಿದ್ದರು, ಮಾಸ್ತಿಯವರ ಬಹಳ ಒತ್ತಾಯದ ಮೇರೆಗೆ 'ಜೀವನ' ಪತ್ರಿಕೆಯಲ್ಲಿ ಪ್ರಕಟವಾಗಲು ಕಂತು ಕಂತಾಗಿ ಬರೆದು ಕೊಟ್ಟರು. ಈ ಪುಸ್ತಕವು ಜನರಿಗೆ ತುಂಬಾ ಇಷ್ಟವಾಗಿತ್ತು. "ಕೆಲವು ನೆನಪುಗಳು" ಎಂಬ ಹೆಸರಿನಿಂದ ಅದನ್ನು ಜೀವನ ಸಾಹಿತ್ಯ ಮಾಲೆಯಲ್ಲಿ ೧೯೫೪ರಲ್ಲಿ ಪ್ರಕಟಿಸಿದ್ದು ಈಗ ಇತಿಹಾಸವಾಗಿದೆ. ೧೯೫೫ರಲ್ಲಿ ಈ ಗ್ರಂಥಕ್ಕೆ "ದೇವರಾಜ ಬಹುದ್ದೂರ್" ಪಾರಿತೋಷಕ ದೊರೆಯಿತು. ರಾಯರು ಮಾಸ್ತಿಯವರಿಗೆ 'ಈ ಹಣ ನಿಮಗೆ ಸೇರಬೇಕಲ್ಲವೆ'? ಎಂದು ಹೇಳಿದರು. ಮಾಸ್ತಿಯವರು "ಆ ಪಾರಿತೋಷಕ ಲೇಖರಿಗೆ ಎಂದು ಕೊಟ್ಟಿರುವುದು, ಅದು ನಿಮಗೆ ಸೇರತಕ್ಕದ್ದು" ಎಂದ ಮೇಲೆ ಅದನ್ನು ತೆಗೆದುಕೊಂಡರಂತೆ. ಮಾಸ್ತಿಯವರು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಸೂಚಿಸಿದ್ದರಂತೆ. ವಿಮರ್ಶಕರೊಬ್ಬರು "ಅದರಲ್ಲಿ ನಾನು ಹೀಗೆ ಮಾಡಿದೆ, ಹಾಗೆ ಮಾಡಿದೆ ಎಂದು ಹೇಳಿ ಕೊಳ್ಳುವುದು ಹೆಚ್ಚಾಗಿದೆ" ಎಂಬುದಾಗಿ ಹೇಳಿದ್ದರಂತೆ. ಆತ್ಮಕಥೆ ಬರೆಯುವಲ್ಲಿ ಸಾಮಾನ್ಯವಾಗಿ ನಾನು ಎನ್ನದೇ ವಿಧಿಯಿಲ್ಲ. ಇಲ್ಲಿ ಆತ್ಮವಿಶ್ವಾಸ, ವಿನೀತ ಭಾವದಿಂದ ಪ್ರಕಟವಾಗುತ್ತದೆ.

ರಾಮರಾಯರ ಚೇರ್‌ಮೆನ್ ಆಗಿದ್ದ ಕಂಪನಿಯ ಆರಂಭೋತ್ಸವಕ್ಕೆ ರಾಜಾಜಿಯವರನ್ನು ಕರೆಸಿದ್ದರು. ಉಪಚಾರದ ವೇಳೆ ಮಾತನಾಡುತ್ತ ಮೌನವಾಗಿ ನಿಂತರು. ಅವರನ್ನು ಕೂರಿ ನಂತರ ಚಿಕಿತ್ಸೆ ಕೊಡಿಸಿ ಮನೆಗೆ ಕಳುಹಿಸಿದರು. ಇದಾದನಂತರದಲ್ಲಿ ಅವರಿಗೆ ಆಯಸ್ಸನ್ನು ಕುರಿತು "Do you know I sometimes catch myself wondering what death will feel Like? Not a Morloid Curiosity, but a desire to know" ಎನ್ನುತ್ತಿದ್ದರು. ಇದಕ್ಕೆ ಉತ್ತರವಾಗಿ ಮಾಸ್ತಿಯವರು "ಜೀವ ಕೊಟ್ಟ ದೇವರು ಸಕಾಲದಲ್ಲಿ ಸಾವನ್ನು ಕೊಡುತ್ತಾನೆ. ಅದನ್ನು ಕುರಿತು ಭಯ ಹೇಗೆ ಬೇಡವೋ ಹಾಗೆಯೇ ನಿರೀಕ್ಷೆಯೂ ಬೇಡ" ಎನ್ನುತ್ತಿದ್ದರು. ರಾಯರು ತಲೆದೂಗುತ್ತ ಖರೆ ಎಂದು ಹೇಳುತ್ತಿದ್ದರು.

ಹೀಗಿರುವಾಗ ಒಮ್ಮೆ ರಾಯರಿಗೆ 'ಹೃದಯರೋಗ' ದಿಂದ ಆಸ್ಪತ್ರೆಗೆ ದಾಖಲಾಗಬೇಕಾಯಿತು. ಹತ್ತು ದಿನ ಚಿಕಿತ್ಸೆ ಪಡೆದು ಮನೆಗೆ ಹಿಂತಿರುಗಿದರು. ಆದರೆ ವ್ಯಾದಿಯಿಂದಾಗಿ, ತುಂಬ ನಡೆಯಬಾರದು, ಮೆಟ್ಟಿಲುಗಳನ್ನು ಏರಬಾರದು, ಬಹಳ ಮಾತನಾಡಬಾರದು, ಕಠಿಣವಾದ ಶ್ರಮ ಮಾಡಬಾರದು ಎಂದು ವೈದ್ಯರು ಹೇಳಿದ್ದರು. ರಾಯರು ಚಟುವಟಿಕೆಯಿಂದ ಕೂಡಿದ್ದ ವ್ಯಕ್ತಿ, ಹೀಗಾಗಿ ಇಕ್ಕಟ್ಟಿನಲ್ಲಿ ಸಿಲುಕಿದಂತಾಯಿತು. ಸ್ವಲ್ಪ ಕಾಲದ ನಂತರ ಶ್ವಾಸಕೋಶದ ತೊಂದರೆಗೆ ಒಳಗಾದರು. ವೈದ್ಯರು ಶ್ವಾಸಕೋಶದಲ್ಲಿ ರಕ್ತ ಮಡುಕಟ್ಟಿದೆ, ಉಸಿರಾಟ ಸುಲಭವಾಗಬೇಕಾದರೆ, ಈ ದ್ರವವನ್ನು ಹೊರಕ್ಕೆ ಹಾಕಬೇಕೆಂದು ತಿಳಿಸಿದರು. ತಂದೆಯವರನ್ನು ನೋಡಲೆಂದೇ ಬಂದಿದ್ದ ರಾಯರ ಮಕ್ಕಳಲ್ಲಿ ಮೇಜರ್ ಶ್ರೀನಿವಾಸರಾಯರು ಸ್ವತಃ ಅತ್ಯಂತ ಶಕ್ತ ಶಾಸ್ತ್ರವೈದ್ಯರು. ಅವಶ್ಯಕ ಎಂದ ಕೂಡಲೆ ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಿ ಮನೆಗೆ ಕರೆತಂದರು.

ಆದರೆ ರಾಯರಿಗೆ ರಕ್ತ ಮಡುಕಟ್ಟುವುದು ವಾಡಿಕೆಯಾಗಿ ಬಿಟ್ಟಿತ್ತು. ಎರಡು ವರ್ಷ ಎನ್ನುವ ವೇಳೆಗೆ ಆರು ಸಲ ಚಿಕಿತ್ಸೆಗೆ ಒಳಗಾದರು. ಒಂದೊಂದು ಸಲವೂ ರಾಯರ ಶಕ್ತಿ ಕುಗ್ಗುತ್ತ ಹೋಗಿ ತೀರ ದುರ್ಬಲರಾದರು. ಕೊನೆಯ ದಿನಗಳಲ್ಲಿ ರಾಯರಿಗೆ ಒಂದು ತೆರನಾದ ಮರುವು ಬಂದಿತು. ವೈದ್ಯರು ಆಮ್ಲಜನಕವನ್ನು ಕೊಟ್ಟು ಜೀವ ಸ್ಫುರಿಸುವಂತೆ ಮಾಡಿದರು. ಕೊನೆಯ ಒಂದೆರೆಡು ಸಲ ರಾಜಾಜಿಯವರು ಆರೋಗ್ಯ ವಿಚಾರಿಸಿ ಧೈರ್ಯ ತುಂಬಿದ್ದರು. ಒಂದು ಬೆಳಿಗ್ಗೆ ರಾಯರು ದೇಹದಿಂದಲೇ ಬಿಡುಗಡೆ ಹೊಂದಿದರು. ದಕ್ಷ ಅಧಿಕಾರಿಯಾಗಿ, ಇಲಾಖೆಯ ಅಧ್ಯಕ್ಷರಾಗಿ, ಸಾಹಿತ್ಯಾಸಕ್ತರಾಗಿ ಅನನ್ಯ ವ್ಯಕ್ತಿತ್ವಹೊಂದಿದ ರಾಯರು ಮರೆಯಾಗಿದ್ದು ತುಂಬಾಲಾರದ ನಷ್ಟವಾಗಿತ್ತು. ರಾಮರಾವ್ ಅನೇಕ ವೇಳೆ, "I have had my innings Prepared to go any moment" ಎನ್ನುತ್ತಿದ್ದರು. ಆ ಧೀರ ಚೇತನ ಬೇರೆ ಏನನ್ನು ಹೇಳಲು ಸಾಧ್ಯ? ಅವರೇ ಹೇಳಿದ ಹಾಗೆ ಜೀವನ ಇನ್ನಿಂಗ್ಸ್‌ನಲ್ಲಿ ಅಧಿಕಾರಾವಧಿಯ ಘಟನೆಗಳು, ಅವರ ವಿದ್ವತ್ತು, ವಿವಿಧ ಇಲಾಖೆಯ ಕಾರ್ಯಗಳು, ನೋಡುಗರಿಗೆ ಮೆಚ್ಚಿಗೆ ಎನಿಸಿದ ರಾಮರಾವ್‌ರ ವರ್ಣರಂಜಿತ ವ್ಯಕ್ತಿತ್ವದ ಇನ್ನಿಂಗ್ಸ್ ಮರಣದವರೆಗೂ ತಕ್ಕದಾಗಿತ್ತು.

ರಾಮರಾವ್‌ರವರ ಕಾಯಿಲೆ ಬೀಳುವವರೆಗೂ ಅವರ ದೇಹವು ದುರ್ಬಲರಾಗಿರಲಿಲ್ಲ, ರಾಯರು ಬಾಲ್ಯದಿಂದಲೂ ದೇಹವನ್ನು ದಂಡಿಸಿ ನಡೆಸಿದ ಜಾಣರು. ಅವರ ಮೈಕಟ್ಟು ಸುಂದರವಾಗಿತ್ತು, ಆ ಬಗ್ಗೆಯೂ ಹೆಮ್ಮೆಯೂ ಇತ್ತು. ಅವರು ಒಂದು ಸಲ ಶ್ರೀರಂಗಪಟ್ಟಣಕ್ಕೆ ಹೋದಾಗ ಹೊಳೆಯಲ್ಲಿ ಇಳಿದರು. ಪಕ್ಕದಲ್ಲಿಯೇ ಮೂರು ನಾಲ್ಕು ಜನ ಹೆಣ್ಣುಮಕ್ಕಳು ಬಟ್ಟೆಯನ್ನು ಹಿಂಡುತ್ತ ಇದ್ದರು. ಅದರಲ್ಲಿ ಒಬ್ಬಾಕೆ ರಾಯರನ್ನು ಕುರಿತು "ಅಣ್ ಎನ್ನ ಅಪ್ಪಡಿ ಇರುಕ್ಕವೇಣುಂ ಅಂಗ್‌ಪಾರ್" ಎಂದಳಂತೆ, ಗೆಳತಿಯರು ಸಹ ಸಮ್ಮತಿಸಿದ್ದರು. ಇವರು ದೇಹವು ಇಳಿವಯಸ್ಸಿನಲ್ಲಿಯೂ ಬಾಗಿರಲಿಲ್ಲ. ಅವರು ದೇಹ ಯೌವ್ವನದಲ್ಲಿದ್ದಂತೆ ಮುಪ್ಪಿನಲ್ಲಿ ಸದೃಢವಾಗಿದ್ದವರು. ಪ್ರಾಯದಲ್ಲಿದ್ದ ರಾಯರು ದುಷ್ಟಪ್ರಾಣಿಗಳನ್ನು ಬೇಟೆಯಾಡಿದ್ದುಂಟು. ಒಂದು ದಿನ ರಾಯರು ಕೋರ್ಟಿನಲ್ಲಿ ವಿಚಾರಣೆ ಮಾಡುತ್ತಿದ್ದ ವೇಳೆ ಯಾರೋ ಗುಡ್ಡದ ಪಕ್ಕದಲ್ಲಿ ಚಿರತೆ ದನದ ಮೇಲೆ ಬಿದ್ದಿದೆ ಎಂದು ಹೇಳಿದರು. ವಿಚಾರಣೆ ನಿಲ್ಲಿಸಿ ತುಪಾಕಿಯನ್ನು ತರಿಸಿಕೊಂಡು ಚಿರತೆಯನ್ನು ಹೊಡೆದು ಕೊಂದರಂತೆ. ಹೀಗೆ ಒಮ್ಮೆ ಬಾಗಿಲ ಬಳಿಯೇ ಹಾದು ಹೋಗುವಾಗ ಪಕ್ಕದಲ್ಲಿ ಹಾವು ಇರುವುದನ್ನು ಗಮನಿಸಿದ ರಾಯರು ಅದನ್ನು ಕೈಯಲ್ಲಿ ಹಿಡಿದರಂತೆ. ರಾಯರ ಕೈಗೆ ಸುತ್ತಿಕೊಂಡಿದ್ದರಿಂದ ಹಾವನ್ನು ಎರಡು ಭಾಗವಾಗಿ ಕೊಯ್ದು ಅದನ್ನು ಬಿಸಾಡಿದರು. ಹೀಗೆಯೇ ಹಲವಾರು ಘಟನೆಗಳು ನಂಬಲು ಸಾಧ್ಯವಲ್ಲದ ರೀತಿಯಲ್ಲಿ ನಡೆದಿರುವುದು ಇವರ 'ಕೆಲವು ನೆನಪುಗಳು' ಗ್ರಂಥದಲ್ಲಿ ಕಾಣುತ್ತದೆ.

ರಾಮರಾವ್‌ರಿಗೆ ದೇಹದಾರ್ಢ್ಯದೊಂದಿಗೆ ಅಷ್ಟೇ ಅಸಾಧಾರಣ ಬುದ್ಧಿಶಕ್ತಿಯಿತ್ತು. ಕನ್ನಡದಲ್ಲಿಯೂ ತುಂಬಾ ಶಕ್ತಿಗಳಿಸಿದ್ದರು. ಇವರ ಇಂಗ್ಲೀಷ್ ವ್ಯಾಮೋಹದಿಂದಲೇ ಕನ್ನಡಕ್ಕೆ ಮಹತ್ವ ನೀಡಲಿಲ್ಲ. ಕೊನೆಕೊನೆಗೆ ಕನ್ನಡದ ಮಹತ್ವವನ್ನು ಅರಿತು ಸ್ನೇಹಿತರಲ್ಲಿ ತೋಡಿಕೊಂಡಿದ್ದುಂಟು. ರಾಯರು ಸಂಸ್ಕೃತವನ್ನು ಅಭ್ಯಾಸ ಮಾಡಿದ್ದರು, ಫ್ರೆಂಚ್ ಭಾಷೆಯನ್ನು ಬಲ್ಲವರು, ಉಪನಿಷತ್, ರಾಮಾಯಣ, ಮಹಾಭಾರತ, ಕಾಳಿದಾಸನ ಕಾವ್ಯ, ಹ್ಯೂಗೊಮೋಲಿಯರ್, ಬಾಲ್ಜಾಕರ ಕೃತಿಗಳು, ಷೇಕ್ಸ್‌ಪಿಯರ್ ನಾಟಕಗಳನ್ನು, ಓದಿದ್ದ ರಾಯರು ಗಾಢವಾದ ಜ್ಞಾನವನ್ನು ಸಂಪಾದಿಸಿದ್ದರು. ರಾಮರಾಯರ ಜ್ಞಾಪಕ ಶಕ್ತಿ ವಿಶಿಷ್ಟವಾಗಿತ್ತು. ಅನೇಕ ಗ್ರಂಥಗಳಿಂದ ಹತ್ತಾರು ಪಂಕ್ತಿ ಗದ್ಯ, ಪದ್ಯವನ್ನು ಹೇಳುತ್ತಿದ್ದರು. ಓದಿದ್ದು ಮಾತ್ರವಲ್ಲ, ನೋಡಿದ ಸಂಗತಿಯೂ ಸ್ಪಷ್ಟವಾಗಿ ಬಹುದಿನಗಳ ಕಾಲ ಜ್ಞಾಪಕವಿರುತ್ತಿತ್ತು.

ರಾಮರಾಯರು ವಿಶ್ವೇಶ್ವರಯ್ಯನವರೊಡನೆ ಕಿರಿಯ ಅಧಿಕಾರಿಗಳಾಗಿ ಕೆಲಸ ಮಾಡಿದವರು. ರಾಯರ ಕಾರ್ಯ ದಕ್ಷತೆ ಮತ್ತು ವ್ಯಕ್ತಿತ್ವವನ್ನು ವಿಶ್ವೇಶ್ವರಯ್ಯನವರು ಮೌನವಾಗಿ ಒಪ್ಪಿಕೊಂಡಿದ್ದರು. ಹಲವಾರು ಸರ್ಕಾರಿ ಸಭೆಗಳಲ್ಲಿ ಸೇರುತ್ತಿದ್ದ ಇವರು ವಾಕ್‌ಚಾತುರ್ಯವನ್ನು ತೋರಿಸಿದ್ದರು. ಒಮ್ಮೆ ಹಿರಿಯ ಅಧಿಕಾರಿಯು ಸರಿಯಾದ ಮಾಹಿತಿ ನೀಡದೆ ವಿಶ್ವೇಶ್ವರಯ್ಯನವರು ನಡೆಸುತ್ತಿದ್ದ ಸಭೆಗೆ ಹಾಜರಾದರು. ಇವರ ಕೆಲಸಗಳಿಂದ ತೃಪ್ತರಾಗದ ವಿಶ್ವೇಶ್ವರಯ್ಯನವರು ಅಸಮಾಧಾನ ವ್ಯಕ್ತಪಡಿಸಿದರು. ರಾಯರು ಅವರ

ವಿರೋಧವಾಗಿ ಮಾತಿಗೆ ನಿಂತರು, ಮಾತಿನ ಚಪಲತೆಯೇ ಏನೋ ಒಮ್ಮೊಮ್ಮೆ ಕಟುವಾದ ಮಾತುಗಳನ್ನೇ ಆಡಿಬಿಡುತ್ತಿದ್ದರು. ಜನಕ್ಕೆ ಇದು ಮಾತಿನ ಚಪಲ, ಬರಿಯ ಚಟ ಆಯಿತು ಎನ್ನಿಸುತ್ತಿತ್ತು.

ರಾಯರದು ತುಂಬಾ ಅಕ್ಕರೆಯ ಸ್ವಭಾವ, ಅವರನ್ನು ವಿರೋಧಿಸುತ್ತಾ ಬಂದಿದ್ದ ಮಲತಾಯಿಯು ಕೊನೆ ಕೊನೆಯಲ್ಲಿ ಹೊಟ್ಟೆಯಲ್ಲಿ ಹುಟ್ಟಿದ ಮಗನೆಂಬಂತೆ ನೋಡಿಕೊಂಡರು. ರಾಯರು ತಂದೆ, ತಾಯಿ ಬಗ್ಗೆ ತುಂಬಾ ಅಭಿಮಾನದಿಂದ ಮಾತನಾಡುತ್ತಿದ್ದರು. ತೀರಿಕೊಂಡ ಪತ್ನಿಯನ್ನು ನೆನೆದು ಗೌರವದ ಮಾತನ್ನು ಆಡುತ್ತಿದ್ದರು. ಪತ್ನಿಯ ವಿಷಯದಲ್ಲಿ ಬಹಳ ಪ್ರೀತಿಯುಳ್ಳವರು, ಪ್ರತಿದಿನ ಸಾಯಂಕಾಲವು ಪತ್ನಿಗಾಗಿ ಹಣ್ಣು, ಹೂವು, ತರುವುದು ಅವರಿಗೆ ವಾಡಿಕೆಯಾಗಿತ್ತು. ರಾಯರಿಗೆ ಪ್ರಾಣಿಗಳೆಂದರೆ ತುಂಬಾ ಪ್ರೀತಿ. ಹಾಗಾಗಿಯೇ ಮನೆಯಲ್ಲಿ ಅಲೋಷಿಯಸ್ ನಾಯಿಗಳು, ಬ್ಲಾಕ್ ಕಾರ್ಟ್ ಕುದುರೆಗಳನ್ನು ಸಾಕಿಕೊಂಡಿದ್ದರು. ರಾಯರಿಗೆ ಬ್ಲಾಕ್‌ಕಾರ್ಟ್ ಕುದುರೆಯೆಂದರೆ ಬಹಳ ಪ್ರೀತಿ, ಕುದುರೆ ಸವಾರಿಯು ಅವರಿಗೆ ಅಚ್ಚುಮೆಚ್ಚಿನ ಹವ್ಯಾಸವಾಗಿತ್ತು.

ರಾಯರು ಸೆಂಟ್ರಲ್ ಕೋ-ಅಪರೇಟೀವ್ ಬ್ಯಾಂಕಿನ ಅಧ್ಯಕ್ಷರಾಗಿ ಹಲವು ವರ್ಷ ಕೆಲಸ ಮಾಡಿದರು, ಕಾಗದ ಪತ್ರ ನೋಡುವುದಕ್ಕೆ ವಾರದಲ್ಲಿ ಎರಡೋ ಮೂರೋ ದಿನ ಬ್ಯಾಂಕಿಗೆ ಹೋಗಬೇಕಾಗುತ್ತಿತ್ತು. ಎರಡು ಮೈಲು ದೂರವಿದ್ದ ಈ ಬ್ಯಾಂಕಿಗೆ ನಡೆದುಕೊಂಡೆ ಹೋಗಿಬರುತ್ತಿದ್ದರು. ಆರೋಗ್ಯ ಕೆಟ್ಟ ಮೇಲೂ ಇವರು ಈ ಕೆಲಸದಲ್ಲಿ ಮುಂದುವರೆದಿದ್ದರು. ಹಾಸಿಗೆಯ ಮೇಲೆ ಮಲಗಿಯೇ ಆ ಸಂಸ್ಥೆಯೇ ಕಾಗದ ಪತ್ರದಗಳನ್ನು ಓದಿ ತಮ್ಮ ನಿರ್ಣಯಗಳನ್ನು ಬರೆಯುತ್ತಿದ್ದರು. ಸಮಿತಿಯ ಒಂದೆರೆಡು ಸಭೆಗಳು ಇವರ ಮನೆಯಲ್ಲಿಯೇ ನಡೆದಿದ್ದವು. ಇವರನ್ನು ಅಧ್ಯಕ್ಷರಾಗಿ ಇರಿಸಿಕೊಳ್ಳಲು ಸಮಿತಿಯ ಸಭೆ ಆಸೆಯಾಗಿತ್ತು. ರಾಯರು ತೀರಿಕೊಂಡಾಗ ಸಂಸ್ಥೆಯವರು ತಮ್ಮ ಮಕ್ಕಳಂತೆ ಅಂತಿಮ ಕಾರ್ಯವನ್ನೆಲ್ಲಾ ನೋಡಿಕೊಂಡರು.

ರಾಯರು ಯುವಕರಾಗಿದ್ದಾಗ ಸಂಗೀತ ಅಭ್ಯಾಸ ಮಾಡಿದ್ದರು. ಅದು ಮುಂದುವರಿಸಿರಲಿಲ್ಲ. ಆದರೂ ಕಲೆಯ ಕುರಿತು ತುಂಬಾ ಆಸಕ್ತಿಯಿತ್ತು. ಅವರು ಕಾಯಿಲೆಯಲ್ಲಿದ್ದ ದಿನದಲ್ಲಿ ಶ್ರೀಮತಿ ಎಂ.ಎಸ್.ಸುಬ್ಬಲಕ್ಷ್ಮಿಯವರು ಬೆಂಗಳೂರಿನ ಕಚೇರಿಯಲ್ಲಿ ಹಾಡಿದರು. ಅವರ ಯಜಮಾನರಾದ ಶ್ರೀ ಟಿ.ಸದಾಶಿವರಾಂರವರು ರಾಜಾಜಿಯ ಮಿತ್ರರಾಗಿದ್ದರು. ರಾಯರನ್ನು ನೋಡಲು ಬಂದರು, ಕುಶಲ ಪ್ರಶ್ನೆ ಸತ್ಕಾರವಾದ ಮೇಲೆ ರಾಯರು "ನಾನು ನಿಮ್ಮ ಗಾಯನ ಕೇಳಲು ಬರಬೇಕಾಗಿತ್ತು, ಆರೋಗ್ಯ ಸರಿಯಾಗಿಲ್ಲ, ಬರಲಾಗಲಿಲ್ಲ, ಆ ಭಾಗ್ಯ ತಪ್ಪಿತು," ಎಂದರಂತೆ. ಸುಬ್ಬಲಕ್ಷ್ಮಿಯವರು "ಇದೇನು! ನನ್ನ ಹಾಡನ್ನು ಕೇಳುವುದಕ್ಕೆ ತಾವು ಕಛೇರಿಗೆ ಬರಬೇಕೆ? ನಾನು ತಮ್ಮ ಸನ್ನಿಧಿಗೆ ಬಂದು ಹಾಡುತ್ತೇನೆ," ಎಂದರು. ಕೆಲವು ತಿಂಗಳ ನಂತರ ರಾಜಾಜಿಯವರು ಬೆಂಗಳೂರಿಗೆ ಬಂದಾಗ ಎಂ.ಎಸ್.ಸುಬ್ಬಲಕ್ಷ್ಮಿಯವರು ಬಂದಿದ್ದರು, ರಾಯರ ಮನೆಯಲ್ಲಿ ಅವರ ಬಂಧುಮಿತ್ರರ ಸಣ್ಣ ಸಭೆಯಲ್ಲಿ ಸೊಗಸಾಗಿ ಗಾಯನ

ಮಾಡಿದ್ದರು. ಈ ಸಂಗೀತದಿಂದ ತಮ್ಮನ್ನು ತಾವೇ ಮರೆತರು, "ಮುದುಕನೊಬ್ಬನ ಮನಸ್ಸಿನ ಆಸೆಯನ್ನು ಅರಿತು ಇಲ್ಲಿ ಬಂದು ಹಾಡಿ ನನಗೆ ಉಪಕಾರ ಮಾಡಿದಿರಿ" ಎಂದು ರಾಯರು ಹೇಳಿದರು. ಸುಬ್ಬಲಕ್ಷ್ಮಿಯವರು ತಮ್ಮಂಥ ಹಿರಿಯರ ಮುಂದೆ ಹಾಡುವುದು ನಮಗೆ ಶ್ರೇಯಸ್ಕರ, ನಮಗೆ ಆರ್ಶೀವಾದ ಮಾಡಿ ಎಂದು ನಮಸ್ಕರಿಸಿದರು.

ರಾಮರಾಯರು ದೇವರನ್ನು ಅಷ್ಟಾಗಿ ನಂಬಿದವರಲ್ಲ, ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದರೂ ಸಂಪ್ರದಾಯಗಳ ಬಗ್ಗೆ ತಲೆಕೆಡಿಸಿಕೊಂಡವರಲ್ಲ. ವಿವಿಧ ಹುದ್ದೆಗಳನ್ನು ಯಶಸ್ವಿಯಾಗಿ ನಿಭಾಯಿಸಿದ್ದರು. ಆತ್ಮವಿಶ್ವಾಸದಲ್ಲಿ ಹೆಚ್ಚಾಗಿ ನಂಬಿಕೆ ಹೊಂದಿದ್ದರು. ರಾಯರು ಕಾಯಿಲೆ ಬೀಳುವುದಕ್ಕೂ ಒಂದೆರೆಡು ವರ್ಷದ ಹಿಂದೆ ರಾಜಾಜಿಯವರ ಮೊಮ್ಮಗಳ ಮದುವೆಗಾಗಿ 'ತಿರುಪತಿ'ಗೆ ಹೋಗಿದ್ದರು. ರಾಜಾಜಿಯವರ ಅನುಯಾಯಿಯಂತೆ ದೇವರ ದರ್ಶನಕ್ಕೆ ಹೋಗಬೇಕಾಯಿತು. "ಆ ದೇವರೆದುರಿಗೆ ನಿಂತಾಗ ಅವರಿಗೆ ಹೇಳಲಾಗದ ಆನಂದ ಉಕ್ಕಿತು. ಕಣ್ಣಿಂದ ನೀರು ಪಳಪಳನೇ ಸುರಿಸಿದ್ದರು ಎಷ್ಟೋ ಹೊತ್ತು ದೇವರನ್ನೇ ನೋಡುತ್ತ ನಿಂತಿದ್ದರಂತೆ." ತಿರುಪತಿಯಿಂದ ಮೈಸೂರಿಗೆ ಬಂದ ನಂತರ ಹಲವು ಸ್ನೇಹಿತರ ಬಳಿ ದೇವರ ಮಹಿಮೆಯನ್ನು ಹೇಳಿಕೊಂಡಿದ್ದರು. ಮಾಸ್ತಿಯವರಿಗೆ ತಿರುಪತಿ ಶ್ರೀನಿವಾಸರ ಫೋಟೊ ಒಂದನ್ನು ಕೇಳಿ ಪಡೆದು ಮನೆಯಲ್ಲಿ ಹಾಕಿಕೊಂಡಿದ್ದರು.

ಈ ಪ್ರಭಾವದಿಂದಾಗಿ ಹಾಸಿಗೆ ಹಿಡಿದ ಕಾಲದಲ್ಲಿ ವಿಷ್ಣು ಸಹಸ್ರನಾಮವನ್ನು ಪಠಿಸುತ್ತಿದ್ದರು. ವೇದ, ಉಪನಿಷತ್, ಪುರಾಣಗಳು, ಶ್ಲೋಕಗಳ ಮೇಲೆ ಪಾಂಡಿತ್ಯವನ್ನು ಹೊಂದಿದ್ದವರು. ರಾಯರು ಉತ್ತಮ ಮನೆತನದಲ್ಲಿ ಜನಿಸಿ, ದೀರ್ಘ ಜೀವನ ನಡೆಸಿ, ನೂರು ಕಷ್ಟ ಸುಖಗಳನ್ನು ಅನುಭವಿಸಿ ಜೀವನದಲ್ಲಿ ಸೋಲದಿದ್ದರೆ ಸಾಕು ಎಂದು ಅಂದುಕೊಳ್ಳುತ್ತಿದ್ದರು. ರಾಮರಾವ್‌ರು ತಮ್ಮ ಜೀವನದ ಯಾತ್ರೆಯನ್ನು ೧೯೭೭ರ ನವೆಂಬರ್‌ನಲ್ಲಿ ಪ್ರಾಣವನ್ನು ತ್ಯಜಿಸಿದರು. ರಾಯರ ವೃತ್ತಿಜೀವನ, ವೈಯಕ್ತಿಕ ಜೀವನದಲ್ಲಿ ವಿಶಿಷ್ಟವಾದ ಅನುಭವದ ಮೂಲಕ ಸಾಹಿತ್ಯಾಸಕ್ತರ ಗಮನಸೆಳೆಯುತ್ತಾರೆ. ರಾಯರು ಕನ್ನಡಕ್ಕೆ ನೀಡಿದಂತಹ "ಕೆಲವು ನೆನಪುಗಳು" ಆತ್ಮಕಥೆಯ ಮೂಲಕ ಚಿರಸ್ಮರಣೀಯವಾಗಿ ಉಳಿದುಕೊಂಡಿದ್ದಾರೆ.

* * *

## ಅಧ್ಯಾಯ - ಐದು

# ನವರತ್ನ ರಾಮರಾವ್ ಅವರ ಸಣ್ಣಕತೆಗಳು ಮತ್ತು ಲೇಖನಗಳ ಅಧ್ಯಯನ

'ಕೆಲವು ನೆನಪುಗಳು' ಪುಸ್ತಕದ ಮೂಲಕ ಪ್ರಸಿದ್ಧಿಗೆ ಬಂದ ನವರತ್ನ ರಾಮರಾಯರು ಬರೆಯಲು ಆರಂಭಿಸಿದ್ದು ಬಹಳ ತಡವಾಗಿ. ಅವರ ಮೊದಲ ಕತೆ 'ಲಕ್ಷ್ಮಣರಾಯನ ಭಾಗ್ಯ' ಪ್ರಬುದ್ಧ ಕರ್ನಾಟಕದಲ್ಲಿ ೧೯೩೨ರಲ್ಲಿ ಪ್ರಕಟವಾಯಿತು. ಈ ಕತೆ ತಕ್ಷಣ ಜನರ ಗಮನ ಸೆಳೆಯಿತೆಂಬುದಕ್ಕೆ ಅದು ಅನಕೃ ಅವರ 'ಕಾಮನ ಬಿಲ್ಲು', ದೇಜಗೌ ಅವರ 'ಹೊಸಗನ್ನಡ ಕಥಾ ಸಂಗ್ರಹ' ಮೊದಲಾದ ಪ್ರಾತಿನಿಧಿಕ ಕಥಾ ಸಂಗ್ರಹಗಳಲ್ಲಿ ಸ್ಥಾನ ಪಡೆದುದೇ ಸಾಕ್ಷಿ, ೧೯೫೧ರಲ್ಲಿ ನಾಲ್ಕು ಕತೆಗಳ ಏಕೈಕ ಸಂಗ್ರಹ 'ಸಣ್ಣ ಕತೆಗಳು' ಪ್ರಕಟವಾಯಿತು. ಅನಂತರ 'ಕಳ್ಳತನ ಕೆಲವು ಕಳ್ಳರು' ಎಂಬುದೊಂದು ಕಥೆ '೩೫ ಸಣ್ಣಕತೆಗಳು ಎಂಬ ಕೃತಿಯಲ್ಲಿ ಬಂದಿದೆ. ರಾಮರಾಯರು ಕತೆಗಳು ಅಂದಿನ ಮತ್ತು ಇಂದಿನ ಸಂದರ್ಭದಲ್ಲಿಟ್ಟು ನೋಡಿದಾಗ ಅವರ ಕತೆಗಳು ವಿಶಿಷ್ಟವಾಗಿ ಕಾಣುತ್ತವೆ. ವಿಶೇಷವಾಗಿ ಅವರ ಕತೆಗಳ ವಸ್ತು ಮತ್ತು ನಿರ್ವಹಣೆ ನಮ್ಮ ಗಮನ ಸೆಳೆಯುತ್ತವೆ.

### ೧. ಲಕ್ಷ್ಮಣರಾಯನ ಭಾಗ್ಯ

ನವರತ್ನರಾಮರಾವ್ ಅವರ ಇಂಗ್ಲೀಷ್ ಸಾಹಿತ್ಯದ ಉಪಾಸಕರಾಗಿದ್ದರು. ತಾರುಣ್ಯದಲ್ಲಿ ಇಂಗ್ಲೀಷ್ ಪತ್ರಿಕೆಗಳಲ್ಲಿ ಲೇಖನಗಳು ಮತ್ತು ಕಾದಂಬರಿಗಳು ಪ್ರಕಟಗೊಂಡಿದ್ದವು. ಪಾಶ್ಚಾತ್ಯರ ಒಡನಾಟವು ರಾಯರಿಗೆ ಹೆಚ್ಚು ಪ್ರೇರಣೆಯನ್ನು ನೀಡಿತ್ತು. ಇವರ ಅಧಿಕಾರವಧಿಯಲ್ಲಿನ ಕನ್ನಡ ಬಳಕೆಯೇ ಸಾಹಿತ್ಯಿಕ ಭಾಷೆಯಾಗಿದೆ. ಮಾಸ್ತಿಯವರ ಕತೆಗಳನ್ನು ಇಂಗ್ಲೀಷ್‌ಗೆ ಭಾಷಾಂತರ ಮಾಡಿದವರು, ಇಂಗ್ಲೀಷ್ ಮೇಲಿನ ಮಮತೆಯಿಂದ ಕನ್ನಡಕ್ಕೆ ಹೆಚ್ಚು ಗಮನ ಕೊಟ್ಟವರಲ್ಲ, ಆದರೂ ಅವರಿಗೆ ಕನ್ನಡ ಸಾಹಿತ್ಯದ

ಮೇಲಿನ ಆಸಕ್ತಿ ಅಪಾರವಾದದ್ದು. ರಾಯರು ಮಗಳಿಗೆ ಕತೆಯೊಂದನ್ನು ಹೇಳುವಾಗ ಮಗಳು ಅವರನ್ನು ಕುರಿತು 'ಅಣ್ಣಾ ನೀವೂ.... ದಿವ್ಯವಾಗಿ ಕತೆ ಹೇಳುತ್ತೀರಲ್ಲಾ, ನೀವು ಏಕೆ ಬರೆಯಬಾರದು?' ಎಂದು ಕೇಳುತ್ತಾಳೆ, ಮಗಳು ಈ ಮಾತುಗಳೇ ರಾಯರಿಗೆ ಕತೆ ಬರೆಯಲು ಪ್ರೇರಣೆಯಾಗುತ್ತದೆ. ಕತೆಯನ್ನು ರಚಿಸುವಾಗ ಸಾಮಾನ್ಯವಾಗಿ ಜನರಾಡುವ ಭಾಷೆಯು ಸಾಹಿತ್ಯಿಕ ಭಾಷೆಯಾಗಬೇಕು ಅನ್ನುವ ಹಂಬಲದಿಂದಾಗಿ, ಮಗಳ ಪ್ರೇರಣೆಯಿಂದಾಗಿ 'ನರಬಲಿ' ಎಂಬ ಕತೆಯನ್ನು ಬರೆದು ಮಾಸ್ತಿಯವರಿಗೆ ಕೊಡುತ್ತಾರೆ. ಮಾಸ್ತಿಯವರು ಇದರ ಶೀರ್ಷಿಕೆಯನ್ನು "ಲಕ್ಷ್ಮಣರಾಯನ ಭಾಗ್ಯ" ಎಂದು ಬದಲಾಯಿಸಿ ಪ್ರಬುದ್ಧ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಿಸುತ್ತಾರೆ. ಈ ಕತೆಯಿಂದಾಗಿ ರಾಯರಲ್ಲಿ ಶ್ರೇಷ್ಠ ಕತೆಗಾರರನ್ನು ಗುರುತಿಸುವಂತೆ ಮಾಡಿದ್ದು, ಸಾಹಿತ್ಯದ ರಚನೆಗೆ ಪ್ರೇರಣೆ ಒದಗಿಸಿದಂತಿದೆ.

"ಲಕ್ಷ್ಮಣರಾಯನ ಭಾಗ್ಯ" ಕತೆಯು ಮಗಳ ಪ್ರೇರಣೆಯಿಂಬಾಗಿ ಬರೆದಿದ್ದು, ಕಾರಣ ತುಂಬಾ ಸರಳವಾಗಿ ಕಟ್ಟಿಕೊಟ್ಟಿರುವುದು ಕಾಣುತ್ತದೆ. ಮಗಳ ಕಥಾಗ್ರಹಿಕೆಗೆ ಅನುಗುಣವಾಗಿ ಬರೆದಂತೆ ಸ್ಪಷ್ಟವಾಗಿದೆ. ವ್ಯಕ್ತಿಯೊಬ್ಬನು ಅನವಶ್ಯಕವಾಗಿ ಆಪತ್ತಿನಲ್ಲಿ ಸಿಕ್ಕಿಹಾಕಿಕೊಳ್ಳುವುದು ಅದರಿಂದ ಹೊರಬರುವುದು ಈ ಕತೆಯ ಮುಖ್ಯವಾದ ವಸ್ತುವಾಗಿದೆ. ಕಥಾ ನಿರೂಪಣೆ, ಶೈಲಿ, ತಂತ್ರಗಾರಿಕೆ, ಸರಳವೆನಿಸಿದರೂ ಕನ್ನಡ ಸಾಹಿತ್ಯದಲ್ಲಿ ಭಿನ್ನವಾಗಿ ಮೂಡಿಬಂದಿವೆ. 

ಬಾಳೇಹಳ್ಳಿಯ ಲಕ್ಷ್ಮಣರಾಯನೆಂಬ ಯುವಕನೇ ಕಥಾನಾಯಕ. ಚುರುಕಾದ ವ್ಯಕ್ತಿಯಂತೆ ಕಂಡುಬಂದರೂ ಸೋಮಾರಿತನವಿತ್ತು. 'ಆರೋಗ್ಯವೇ ಭಾಗ್ಯ'ಎಂಬ ನಾಣ್ನುಡಿಗೆ ತಕ್ಕದಾದ ಮೈಸಿರಿ ರಾಯರು ಲಕ್ಷ್ಮಣರಾಯನ ದೇಹಸಿರಿಯನ್ನು ನಿರೂಪಿಸಿದ್ದು ಭಿನ್ನವಾಗಿದೆ. ಲಕ್ಷ್ಮಣನು ಆರು ಅಡಿ ಎತ್ತರ, ಬೀಸಾದ ಎದೆ, ದಪ್ಪನಾದ ಕೈಗಳಿಂದ ತುಂಬಿ ಬಲಿತ ನೀಡುತೋಳುಗಳು, ತೇಗದ ಮರದಿಂದ ಕಡೆದು ಮಾಡಿದ ತೊಡೆಗಳು, ಗೂಳಿಯ ಕತ್ತಿನಂತಿರುವ ಕತ್ತು, ಸರಳ ಸ್ವಭಾವದ ಮುಖ, ಜಡತ್ವದಿಂದ ಕೂಡಿದ ಒಳ್ಳೆಯತನದ ವ್ಯಕ್ತಿತ್ವ ರಾಯರ ಈ ರೀತಿಯ ವರ್ಣನೆ ವಿಶೇಷವೆನಿಸುತ್ತದೆ. ಬ್ರಾಹ್ಮಣನಾದ ಲಕ್ಷ್ಮಣನು ಭಾರಿ ಗಾತ್ರದ ದೇಹ ಸಹಜವಾಗಿಯೇ ಅನ್ಯರಲ್ಲಿ ಕೂತುಹಲ ಮೂಡಿಸುವಂತಿದೆ. ಸ್ವತಃ ಬ್ರಾಹ್ಮಣರಾದ ಅವರು ತಮ್ಮ ದೇಹವನ್ನು ಅಚ್ಚುಕಟ್ಟಾಗಿಟ್ಟುಕೊಳ್ಳಲು ಕಸರತ್ತು ಮಾಡುತ್ತಿದ್ದುದು ಆಶ್ಚರ್ಯವೆನಿಸುತ್ತದೆ. ಇವರಿಗೆ ಪಾಶ್ಚಾತ್ಯರ ಪ್ರೇರಣೆ ಹಾಗೂ ಉನ್ನತ ಹುದ್ದೆಗಳ ಪ್ರಭಾವವೂ ಇರಬಹುದು. ಅವರ ಕತೆಯಲ್ಲೂ ಈ ತರಹದಲ್ಲಿ ಬಳಕೆ ಮಾಡಿಕೊಂಡಿದ್ದು ವಿಶೇಷವಾಗಿದೆ. ಲಕ್ಷ್ಮಣನ ದೇಹದ ಬೆಳವಣಿಗೆಗೆ ಅವನ ತಂದೆ -ತಾಯಿಗಳು ಚಿಂತೆಗಿಡಾಗಿದ್ದಲ್ಲದೆ, ಈ ಕೊರಗಿನಿಂದಲೇ ಸತ್ತರೇನೊ ಎಂಬುದು ಲಕ್ಷ್ಮಣನ ಬಡತನ, ಹಸಿವನ್ನು ತೋರಿಸುವುದಲ್ಲದೆ ಹಾಸ್ಯಸ್ಪದವೆನಿಸುತ್ತದೆ.

ಬಾಳೇಹಳ್ಳಿಯ ಎಲ್ಲರಿಗೂ "ಆರೋಗ್ಯವೆ ಭಾಗ್ಯ" ಎಂಬಂತೆ ಕಂಡುಬಂದರೂ, ಲಕ್ಷ್ಮಣರಾಯರಿಗೆ ಮಾತ್ರ ಬಡತನ ಕಾಡಿಸುತ್ತಿತ್ತು. ತಂಗಿಗೊಂದು ಸೀರೆ ಕೊಡಿಸುವ, ಮದುವೆ ಮಾಡಿಮುಗಿಸುವ ಆಸೆ

ಹಲವು ವರ್ಷಗಳಿಂದ ಕನಸಾಗಿಯೇ ಇರುವುದು ಲಕ್ಷ್ಮಣರಾಯನಿಗೆ ದೊಡ್ಡಕೊರಗಾಗಿತ್ತು. ಸ್ವಾಭಿಮಾನಿಯಾದ ಲಕ್ಷ್ಮಣನು, ಯಾರ ಬಳಿಯೂ ಬೇಡಿಕೊಳ್ಳುವ ವ್ಯಕ್ತಿತ್ವ ಅವನದಲ್ಲ. ಹೊಟ್ಟೆಯ ತುಂಬಾ ಹಸಿವು ಇದ್ದರೂ ಸರಿಯಾಗಿ ಊಟ ಮಾಡದೆ ಕುಟುಂಬದ ಸಮಸ್ಯೆ ಅವನನ್ನು ಚಿಂತಿಸುವಂತೆ ಮಾಡಿದ್ದವು. ಸಾರ್ಥಕವಲ್ಲದ ಆರೋಗ್ಯವು ಅಸಮಧಾನವನ್ನು ಉಂಟುಮಾಡಿತ್ತು.

ಲಕ್ಷ್ಮಣನು ಹೊಳೆಯಲ್ಲಿ ಸ್ನಾನ ಮಾಡುತ್ತಿರುವಾಗ ಅಪರಿಚಿತರೊಬ್ಬರು ಪೂಜಿಸುವ ಸಲುವಾಗಿ ಇಪ್ಪತ್ತು ರೂಪಾಯಿಗಳನ್ನು ಕೊಡುವುದಾಗಿ ಆಸೆ ತೋರಿಸುತ್ತಾರೆ. ತಂಗಿಗೆ ಸೀರೆ ತೆಗೆದುಕೊಡುವ ಆಸೆಯಿಂದಲೋ, ಕುಟುಂಬದ ನಿರ್ವಹಣೆಯೋ ಲಕ್ಷ್ಮಣ ಮರು ಯೋಚಿಸದೆ ಒಪ್ಪಿಕೊಂಡು ಆಪತ್ತಿನಲ್ಲಿ ಸಿಕ್ಕಿಕೊಳ್ಳುತ್ತಾನೆ. ಅಪರಿಚಿತರ ಹಿಂದಿನ ದುರೂದ್ದೇಶ ಅರಿಯದೆ ಒಪ್ಪಿಕೊಂಡಿದ್ದು ಅವನಲ್ಲಿನ ಮೌಢ್ಯತೆಯಾಗಿದೆ. ಬ್ರಾಹ್ಮಣನಾದ ಲಕ್ಷ್ಮಣರಾಯನಿಗೆ ಪೂಜೆಯ ವಿಧಾನಗಳು ಅವನಿಗೆ ತಿಳಿಯದೇ ಇರುವುದು ಅವನಲ್ಲಿನ ಸಂಪ್ರದಾಯವನ್ನು ವಿರೋಧಿಸುವ ಮನೋಭಾವ ಹೊಂದಿದ್ದ ಎಂಬುದು ಸ್ಪಷ್ಟವಾಗುತ್ತದೆ. ರಾಮರಾಯರು ಸಹ ಈ ತರಹದ ನಿಲುವು ಹೊಂದಿದವರು. ಅವರ ಸಂಪ್ರದಾಯ ಸುಧಾರಣೆ ಲೇಖನದಲ್ಲಿ ಮೌಢ್ಯ ಆಚರಣೆಗಳು ಸ್ಪಷ್ಟವಾಗುತ್ತವೆ. ರಾಮರಾಯರ ವ್ಯಕ್ತಿತ್ವವೂ ಸಹ ಅವರ ಕತೆಗಳಲ್ಲಿ ಸೂಕ್ಷ್ಮವಾಗಿ ಕಂಡು ಬಂದಿರುವುದು ಗಮನಿಸಬಹುದಾಗಿದೆ.

ಅಪರಿಚಿತರು ಲಕ್ಷ್ಮಣರಾಯನಿಗೆ ದಿಕ್ಕುತಪ್ಪಿಸುವ ಉದ್ದೇಶದಿಂದ ಕಣ್ಣುಕಟ್ಟಿ ತಿರುಗಿಸಿ ತಮ್ಮ ಬಿಡಾರಕ್ಕೆ ಹೋಗುವುದು, ಚೀಲದಲ್ಲಿ ವ್ಯಕ್ತಿಯೊಬ್ಬನನ್ನು ಮತ್ತಿನ ಔಷಧ ನೀಡಿ ಹೂಡಿಹಾಕಿರುತ್ತಾರೆ. ಈ ರೀತಿಯ ಕತೆಯನ್ನು ಕಟ್ಟುವಲ್ಲಿನ ತಂತ್ರಗಾರಿಕೆಯು ಅವರ ಜಾಣ್ಮೆಯನ್ನು ತೋರಿಸುತ್ತದೆ. ಲಕ್ಷ್ಮಣರಾಯನು ಆಪತ್ತಿನಲ್ಲಿರುವ ಅಪರಿಚಿತನನ್ನು ಹೊತ್ತುಕೊಂಡು ಬರುವುದು ಹಾಗೂ ಅವನನ್ನು ಸುರಕ್ಷಿತನನ್ನಾಗಿ ಮಾಡಿದ್ದು ಲಕ್ಷ್ಮಣರಾಯನ ಜಾಣ್ಮೆಯನ್ನು ಪ್ರತಿಬಿಂಬಿಸುವಂತಿದೆ. ಕಥೆಯ ಪ್ರಾರಂಭದಲ್ಲಿ ನೀಡಿದಂತಹ ಲಕ್ಷ್ಮಣನ ದೈಹಿಕ ವರ್ಣನೆಯು ಕಥೆಯ ಕೊನೆಯಲ್ಲಿ ಆಪತ್ತಿನಲ್ಲಿರುವ ವ್ಯಕ್ತಿಯನ್ನು ಹೊರುವುದಕ್ಕಾಗಿಯೇ ಎಂದೆನಿಸುತ್ತದೆ. ದುಡ್ಡಿನ ಆಸೆಯಿಂದಲೇ ಪೂಜಿಸುವುದಾಗಿ ಒಪ್ಪಿಕೊಂಡ ಲಕ್ಷ್ಮಣರಾಯನು ಅವರ ದುರೂದ್ದೇಶವನ್ನು ಅರಿತು ರಕ್ಷಿಸುವ ಸಂದರ್ಭವನ್ನು ರಾಯರು ಕುತೂಹಲಕಾರಿಯಾಗಿ ನಿರೂಪಿಸಿದ್ದು ತಿಳಿದು ಬರುತ್ತದೆ. ಲಕ್ಷ್ಮಣರಾಯನ ಇಂತಹ ಸಾಹಸದ ಪರಿಣಾಮವಾಗಿ ಅವನಿಗೆ ಬಹುಮಾನದ ಜೊತೆಗೆ, ಪೊಲೀಸ್ ಹುದ್ದೆಯೂ ಲಭಿಸುತ್ತದೆ. ವ್ಯಕ್ತಿಯೊಬ್ಬನ ಒಳ್ಳೆಯತನಕ್ಕೆ ಸಿಕ್ಕ ಪ್ರತಿಫಲ ಎಂಬುದು ಅವರ ನಿಲುವಾಗಿತ್ತು.

ರಾಮರಾವ್ ಅವರು ಕನ್ನಡ ಭಾಷೆಗೆ ಕೊಟ್ಟಂತಹ ಮೊದಲ ಕೊಡುಗೆಯೇ 'ಲಕ್ಷ್ಮಣರಾಯನ ಭಾಗ್ಯ.' ಈ ಕತೆಯನ್ನು ಮಗಳ ಮೇಲಿನ ಮಮತೆಯಿಂದ ಬರೆದಿರುವುದರಿಂದ ಕಥಾವಸ್ತು ಸರಳವಾಗಿದ್ದರೂ ವಿಶಿಷ್ಟವಾಗಿ ನಿರೂಪಿಸಿದ್ದು ಕಾಣುತ್ತೇವೆ. ಸಾಹಿತ್ಯಾಸಕ್ತರಾಗಿದ್ದ ರಾಯರು, ಕನ್ನಡವನ್ನು ಅಷ್ಟಾಗಿ ರುಚಿಸದೇ ಹೋದರು ಜನಸಾಮಾನ್ಯರ ಭಾಷೆಯೇ ಸಾಹಿತ್ಯದ ಭಾಷೆಯಾಗಿರಬೇಕು ಎನ್ನುವಂತಹ ಚಿಂತನೆ

ಅವರದು. ರಾಯರಲ್ಲಿದ್ದ ವಿದ್ವತ್ತು; ಅಧಿಕಾರವಧಿಯ. ಅವರ ಅನುಭವಗಳು ಕಥೆಯನ್ನು ರಚಿಸಲು ಪ್ರೇರಣೆಯಾಗಿ ಕತೆಗಾರರನ್ನು ಗುರುತಿಸುವಂತಾಯಿತು.

ಇದು ಮಗಳಿಗಾಗಿ ಬರೆದ ಕತೆಯಾಗಿರುವುದರಿಂದ ಮಕ್ಕಳ ಮನಸ್ಸಿಗೆ ಹತ್ತಿರವಾಗುವಂತಹ ಕಥಾವಸ್ತು. ಕುತೂಹಲಕಾರಿಯಾದ ನಿರೂಪಣೆ, ಕತೆಯನ್ನು ಮುಂದುವರಿಸುವ ಶೈಲಿಯು ವಿಶೇಷವೆನಿಸುತ್ತದೆ. ಲಕ್ಷ್ಮಣರಾಯನ ಭಾಗ್ಯವು ನೀತಿ ಭೋಧನೆಯನ್ನು ಮಾಡುವಂತಹ ಕತೆಯಾಗಿದೆ. ರಾಯರು ಕತೆಯ ಕೊನೆಯಲ್ಲಿ ದ್ವಂದ್ವವನ್ನು ಸೃಷ್ಟಿಸಿದಂತಿದೆ. ಕತೆಯು ವಾಸ್ತವವಾಗಿ ನೆಡೆದ್ದದೋ? ಅಥಾವ ಕತೆಗಾರನ ಕಲ್ಪನೆಯೋ? ಎಂಬ ಚರ್ಚೆಗೆ ಗ್ರಾಸವಾಗಿದೆ. ಅನೇಕ ಕತೆಗಳು ವಾಸ್ತವವಾಗಿ ನಡೆದ ಘಟನೆಗಳು ಕತೆಗಳಾಗಿ ಹೊರಬಂದಿರುವುದು ಕಾಣುತ್ತೇವೆ. ರಾಯರು ಈ ಕತೆಯನ್ನು ಮತ್ತಷ್ಟು ವಿಶಿಷ್ಟವಾಗಿಸಬಹುದಿತ್ತು. ರಾಯರು ಕತೆಯಲ್ಲಿ ಓದುಗರೊಡನೆ ಚರ್ಚಿಸುವಂತೆ ನಿರೂಪಿಸಿರುವುದು ಅವರ ಕತೆಯಲ್ಲಿನ ಮತ್ತೊಂದು ವಿಶೇಷತೆ ಎನ್ನಬಹುದು. ಬ್ರಾಹ್ಮಣ ಮನೆತನದ ರಾಮರಾವ್ ಅವರು, ಸಂಪ್ರದಾಯಸ್ಥ ಪೂಜಾ ವಿಧಾನವನ್ನು ವಿರೋಧಿಸುವವರಾಗಿದ್ದರು. ಇಂತಹ ವಿರೋಧ ಅವರ ಕತೆಗಳಲ್ಲಿ ಲಕ್ಷ್ಮಣನ ಮೂಲಕ ಗುರುತಿಸಿಕೊಂಡಿರುವುದು ತಿಳಿದುಬರುತ್ತದೆ

**೨. ತಾವರೆ ಕೋಟೆ**

ನವರತ್ನ ರಾಮರಾವ್ ಅವರ ನಾಲ್ಕು ಸಣ್ಣ ಕತೆಗಳಲ್ಲಿ 'ತಾವರೆ ಕೋಟೆ' ಕತೆಯು ಭಿನ್ನವಾಗಿದೆ. ಆಧುನಿಕ ವೃತ್ತಿ ಬದುಕಿನ ವ್ಯಕ್ತಿಗಳನ್ನು ಅವರ ಜೊತೆಗಿನ ಸಂವಾದಗಳು ಮತ್ತು ನಂತರದ ಘಟನೆಗಳನ್ನು ಓದುಗರ ಕುತೂಹಲವನ್ನು ಹೆಚ್ಚಿಸುವ ಕತೆಯಾಗಿದೆ. ಈ ಕತೆಯು ರಾಯರ ನಿಜ ಜೀವನದಲ್ಲಿ ನಡೆದಿರುವಂತಹ ಘಟನೆಯೋ ಅಧಿಕಾರವಧಿಯಲ್ಲಿ ನಡೆದ ಕಾರ್ಯವೋ ಎಂಬಂತೆ ಭಾಸವಾಗುತ್ತದೆ. ಈ ಕತೆಯ ನಿರೂಪಣಾ ಶೈಲಿ ರಾಯರನ್ನು ಶ್ರೇಷ್ಟಕತೆಗಾರರನ್ನಾಗಿ ಗುರುತಿಸುವಂತಾಗಿದೆ. ಮೂಲತಃ ಸಾಹಿತಿಗಳಲ್ಲದ ಅವರು, ವೃತ್ತಿ ಜೀವನದಲ್ಲಿ ಮಾಸ್ತಿಯವರ ಒಡನಾಟ ಮತ್ತು ವಿದ್ವಾಂಸರ ಪ್ರಭಾವದಿಂದಾಗಿಯೇ ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡುವಲ್ಲಿ ಸಫಲರಾದವರು. ಮಾಸ್ತಿಯವರ ಅನೇಕ ಸಣ್ಣ ಕತೆಗಳನ್ನು ಓದಿದ್ದ ರಾಯರು 'ತಾವರೆ ಕೋಟೆ' ಕತೆಯ ರಚನೆಯ ಪ್ರಾರಂಭದ ಭಾಗವನ್ನು ಅವರ ಕತೆಗಳಲ್ಲಿನ ತಂತ್ರಗಾರಿಕೆ ಅನ್ನಿಸಿಕೊಂಡಂತಿದೆ. ಮಾಸ್ತಿ, ಆನಂದಕಂದ ಕತೆಗಳಲ್ಲಿನ ರಚನೆಯು ರಾಯರ ಈ ಕತೆಯಲ್ಲಿ ಕಾಣಬಹುದಾಗಿದೆ.

ತಾವರೆಕೋಟೆ ಕತೆಯ ಪ್ರಾರಂಭವನ್ನು ನಿರೂಪಿಸುವಲ್ಲಿ ಹೊಸತನವನ್ನು ಸೃಷ್ಟಿಸಿದಂತಿದೆ. ರಾಯರು ಬ್ರಿಟೀಷ್ ಸರ್ಕಾರದ ಅಧಿಕಾರಿಯಾಗಿರುವುದರಿಂದಲೇ ತಮ್ಮ ಕತೆಯ ಪಾತ್ರಗಳನ್ನು ಆಧುನಿಕ ವೃತ್ತಿ ಬದುಕಿನ ವ್ಯಕ್ತಿಗಳ ಚರ್ಚೆ ಮತ್ತು ಅನುಭವಗಳನ್ನು ತಮ್ಮ ಕತೆಯ ಜೀವಾಳವಾಗಿಸಿಕೊಂಡಿದ್ದಾರೆ. ಪಾರೆಸ್ಟ್‌ರೇಂಜರ್ ಅಣ್ಣಪ್ಪನವರು ಕಥಾನಿರೂಪಕರಾದ ವೈದ್ಯರು, ಭೌತಶಾಸ್ತ್ರದ ಪ್ರೊಫೆಸರ್‌ರಾದ

ಡಾ.ನಾರಾಯಣರಾವ್ ಇವರು ಕತೆಯ ಪ್ರಮುಖ ಪಾತ್ರಗಳಾಗಿದ್ದಾರೆ. ರಾಯರು ೧೮-೧೯ನೇ ಶತಮಾನದವರಾಗಿದ್ದರಿಂದ ಈ ಕತೆಯ ರಚನೆಯನ್ನೂ ಸಹ ಕಾಲಕ್ಕೆ ಹೋಲುವಂತೆ ರಚಿಸಿದ್ದಾರೆ. ಕತೆಯ ಪ್ರಾರಂಭವನ್ನು 'ನಾನು' ಎಂಬುದಾಗಿ ಕತೆಯನ್ನು ಪರಿಚಯಿಸಲ್ಪಡುತ್ತಿದ್ದು, ರಾಯರ ವೃತ್ತಿ ಜೀವನದಲ್ಲಿ ನಡೆದಿರಬಹುದೇನೋ ಎನ್ನುವಂತಹ ಸಂಶಯವೂ ಮೂಡುತ್ತದೆ. ಕತೆಯನ್ನು ವಾಸ್ತವವಾಗಿಯೂ, ಅಸಹಜವಾಗಿಯೂ ರಚಿಸಿದರಿಂದ ರಾಯರಲ್ಲಿನ ಕಥಾಶೈಲಿ ಮತ್ತು ತಂತ್ರಗಾರಿಕೆಯನ್ನು ತಿಳಿಸುತ್ತದೆ. ಉನ್ನತ ವೃತ್ತಿ ಬದುಕಿನ ವ್ಯಕ್ತಿಗಳು ಅಂದು ಅರಣ್ಯ ಶಿಕಾರಿ ಮತ್ತು ಸಾಹಸ ಯಾತ್ರೆಗಳು ಸಾಮಾನ್ಯವಾಗಿದ್ದವೂ, ರಾಯರ ನೈಜ ಜೀವನದಲ್ಲಿಯೂ ಇಂತಹ ಶಿಕಾರಿಗಳು ತಿಳಿದು ಬರುತ್ತದೆ. ಇಂತಹ ಅನುಭವದಿಂದಾಗಿ ಅರಣ್ಯದಲ್ಲಿನ ವಾಸ್ತವತೆಯನ್ನು, ವ್ಯವಹಾರಿಕತೆಯನ್ನು, ಕತೆಯಲ್ಲಿ ಸೊಗಸಾಗಿ ಕಟ್ಟಿಕೊಡುವುದಕ್ಕೆ ಸಾದ್ಯವಾಗಿದೆ. ಅರಣ್ಯದ ರಮ್ಯತೆಯನ್ನು, ದಿನನಿತ್ಯದ ಚಟುವಟಿಕೆಯನ್ನು ತಿಳಿಸಿದ್ದಾರೆ. ನದಿ ಕೆರೆಗಳಲ್ಲಿ ಈಜುವುದು, ಭೋಜನ ಡೇರೆಯಲ್ಲಿ ನಿದ್ರಿಸುವುದು, ಚುಟ್ಟ ಸೇದುತ್ತ ಹರಟುವುದು ಇವರ ಪ್ರತಿದಿನದ ಪರಿಪಾಠವಾಗಿದ್ದವು. ಕಥಾ ರಚನೆಯಲ್ಲಿ ರಾಯರು ಇದರಲ್ಲಿ ದುಷ್ಟವಾದ ವರ್ತನೆಯೇನಾದರೂ ಉಂಟೇ ? ಎಂದು ಓದುಗರನ್ನು ಪ್ರಶ್ನಿಸಿದ್ದು ವಿಶೇಷವೆನಿಸುತ್ತದೆ. ಋಷಿಗಳು ಪೂರ್ವಕಾಲದಲ್ಲಿ ದಂಡಕಾರಣ್ಯದಲ್ಲಿ ಹೀಗೆಯೇ ಕಾಲಕ್ಷೇಪ ಮಾಡುತ್ತಿದ್ದರೇನೊ ಎಂಬಂತಹ ನಿರೂಪಣೆಯು ಪಾತ್ರಗಳಲ್ಲಿ ವಿಮರ್ಶಿಸುವ ಜೊತೆಗೆ ಪಾತ್ರಗಳಲ್ಲಿನ ಒಳಮನಸ್ಸನ್ನು ತಿಳಿಸುವ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಕಥೆಯ ತಂತ್ರಗಾರಿಕೆಯಲ್ಲಿ ಭಿನ್ನವಾಗಿ ಕಟ್ಟಿಕೊಡುವುದೇ ವಿಶಿಷ್ಟತೆಯಾಗಿದೆ.

ಫಾರೆಸ್ಟ್ ರೇಂಜರ್ ಅಣ್ಣಪ್ಪನವರು "ಹಿಂದಿನವರು ವನದೇವತೆಯೆಂದು ಹೇಳುತ್ತಿದ್ದರಲ್ಲ, ಅದು ಕೇವಲ ಭ್ರಮೆಯಲ್ಲ ಪ್ರತಿಯೊಂದು ಕಾಡಿನಲ್ಲಿ ಒಂದು ಆತ್ಮ, ಒಂದು ಸ್ವರೂಪ ಇದೆ. ಸಾವಧಾನದಿಂದ ಪ್ರೀತಿಯಿಂದ ಅರಣ್ಯದ ಸೇವೆಯನ್ನು ಮಾಡುವ ಉಪಾಸಕರಿಗೆ ಅದು ಪ್ರತ್ಯಕ್ಷವಾಗುತ್ತದೆ ತಿಳಿಸುತ್ತಾರೆ" ಅಣ್ಣಪ್ಪನವರು ತಮ್ಮ ವೃತ್ತಿ ಬದುಕನ್ನು ಅರಣ್ಯದಲ್ಲಿಯೇ ಕಳೆದಿದ್ದರಿಂದ ಅರಣ್ಯದ ಬಗ್ಗೆ ಸಹಜವಾಗಿ ಇಂತಹ ನಂಬಿಕೆ ಸಾಮಾನ್ಯವಾಗಿರುತ್ತದೆ. ಅಣ್ಣಪ್ಪನವರು ಚರ್ಚೆಯ ಮೂಲಕ ಅರಣ್ಯದ ಬಗೆಗಿನ ಸಾಮಾನ್ಯ ಕಲ್ಪನೆಯನ್ನು ಮತ್ತೊಂದು ದಿಕ್ಕಿಗೆ ಕೊಂಡೊಯ್ಯುವಲ್ಲಿ ಕತೆಯು ಸಾಗುತ್ತದೆ. ಈ ಹೇಳಿಕೆಗೆ ಸಮಂಜಸವೆಂಬಂತೆ ಅರಣ್ಯದಲ್ಲಿ ಎಲ್ಲಿಯೋ ಮಂದವಾದ ಗಾಳಿ, ದೀರ್ಘವಾದ ಮಧುರ ಸ್ವರವು ಬರುವುದು ಅವರಲ್ಲಿನ ನಂಬಿಕೆಯನ್ನು ಹಿಮ್ಮಡಿಗೊಳಿಸುತ್ತದೆ. ಅಣ್ಣಪ್ಪನವರ ಅರಣ್ಯದ ಮೇಲಿನ ಕಲ್ಪನೆಯ ನಡುವೆ ವೈದ್ಯರ ನೆನಪು ಹಾಸ್ಯಾಸ್ಪದವೆನಿಸಿದರೂ ಕಥಾರಚನೆನೆಗ ಸೂಕ್ತವೆನಿಸುತ್ತದೆ. ರುದ್ರನಗರದ ವೈದ್ಯರ ಗುರುಗಳು ಗಾಯವನ್ನು ನೋಡಿ ರೋಗಿಯ ಹಿನ್ನೆಲೆಯನ್ನು ಹೇಳುವುದು ವೈದ್ಯರಿಗೆ ಸಹಜವಾಗಿದ್ದರೂ ಹಾಸ್ಯಸ್ಪದವಾಗಿ ಮತ್ತಷ್ಟು ಬಿಗಿಗೊಳಿಸಿದಂತಿದೆ.

ಮೇಧಾವಿಗಳು, ಭಾವನಶಕ್ತಿವುಳ್ಳವರು ಪ್ರಕೃತಿಯೊಂದಿಗಿನ ಗಾಢ ಪ್ರೇಮದಿಂದ ಪರಿಸರವನ್ನು ಆರಾಧಿಸುವವರಾಗಿರುತ್ತಾರೆ. ರಾಯರು ಪರಿಸರ ಮೇಲಿನ ದೃಷ್ಟಿಕೋನವನ್ನು 'Poetic eye' ಎಂತಲೂ ಕರೆದಿದ್ದಾರೆ. ವಿಲಿಯಂ ವರ್ಡ್ಸ್‌ವರ್ತ್ ಆಂಗ್ಲಕವಿ ಪರಿಸರವನ್ನು ತನ್ನ ಕವನಗಳಲ್ಲಿ ಜೀವಾಳವಾಗಿರಿಸಿಕೊಂಡವರು. ವರ್ಡ್ಸ್‌ವರ್ತ್‌ರ 'Poetic eye' ಹೆಚ್ಚು ಪ್ರಚಲಿತವಾಗಿತ್ತು. ಇಂಗ್ಲೀಷ್ ಸಾಹಿತ್ಯದ ಉಪಾಸಕರಾದ ರಾಯರು ಪರಿಸರದ ಮೇಲಿನ ವಿಭಿನ್ನ ದೃಷ್ಟಿಕೋನಗಳಿಗೆ ಪೂರಕವಾಗಿ ಈ ಪದದ ಬಳಕೆ ಸೂಕ್ತವೆನಿಸುತ್ತದೆ. ಪ್ರಕೃತಿಯ ಸೃಷ್ಟಿಯನ್ನು " There are more things in heaven and earth " ಎಂದು ತಿಳಿಸಿದ್ದು ಪ್ರಕೃತಿಯಲ್ಲಿನ ಸಹಜತೆ ಮತ್ತು ಅಸಹಜತೆಯನ್ನು ಎತ್ತಿ ತೋರಿಸುವಂತಿದೆ.

ರಾಯರು ತಮ್ಮ ಕತೆಯನ್ನು ವಿಶಿಷ್ಟವಾಗಿ ಕಟ್ಟಿಕೊಟ್ಟಿದ್ದಾರೆ. ಇದುವರೆಗೆ ನಡೆದ ಚರ್ಚೆಯು ಕತೆಗೆ ಪೂರಕವಾಗಿದ್ದು, ಪ್ರಧಾನವಾದ ಕತೆಯನ್ನು ನಾರಾಯಣರಾವ್ ಮೂಲಕ ತಿಳಿಸುತ್ತಾರೆ. ಕತೆಯನ್ನು ಪ್ರಾರಂಭಿಸುತ್ತಾ ನನ್ನ ಅನುಭವದ ನನಗೆ ಬಂದದ್ದು ಇದೇ ಕಾಚಿಯ ಅರಣ್ಯದಲ್ಲಿ ಈ ಸನ್ನಿವೇಶ ಹೊತ್ತು, ಈ ಸ್ನೇಹಿತರು ಇವುಗಳಿಂದ ಅನುಕೂಲವಾದ ವಾತಾವರಣ ಈ ಕತೆಗೆ ದೊರೆಯಲಾರದು ನಾನು ಹೇಳುವುದು ನಿಜವಾಗಿ ನಡೆದದ್ದೋ, ಕನಸೊ, ನನಗೇ ಚೆನ್ನಾಗಿ ವಿಮರ್ಶೆಗೆ ಬಂದಿಲ್ಲ, ಇದನ್ನು ಒಂದು ಕತೆಯೆಂದು ಭಾವಿಸಿ, ಇದರಿಂದ ಕೆಲವು ಕಾಲ ವಿನೋದದಲ್ಲಿ ವಿಸ್ಮಯದಲ್ಲಿ ಸಾಗಿದರೆ ನನಗೆ ಅದೇ ಸಂತೋಷ ಎಂದು ಹೇಳುತ್ತಾರೆ, ರಾಯರು ಕಥೆಯನ್ನು ನಿರೂಪಿಸುವ ಮತ್ತು ಓದುಗರ ಗಮನವನ್ನು ಸೆಳೆಯುವ ತಂತ್ರಗಾರಿಕೆಯಾಗಿದೆ. ಕತೆಯನ್ನು ತಿಳಿಸುವ ಮುಂಚೆಯೇ ಈ ಅಭಿವ್ಯಕ್ತಿಯಿಂದಾಗಿ ಕತೆಯಲ್ಲಿನ ವಾಸ್ತವದೋ ಮತ್ತು ಕಲ್ಪನೆಯದೋ,ಎನ್ನುವಂತಹ ವಿಚಾರಗಳ ನಿರ್ಧಾರವನ್ನು ಓದುಗರ ದೃಷ್ಟಿಕೋನಕ್ಕೆ ಬಿಟ್ಟಾಂತಾಗಿದ್ದು ರಾಯರ ಕಥಾ ರಚನೆಯ ಶೈಲಿಯನ್ನು ಭಿನ್ನವಾಗಿ ನಿರೂಪಿಸುವಲ್ಲಿ ಯಶಸ್ವಿಯಾಗಿದ್ದಾರೆ.

ಭೌತಶಾಸ್ತ್ರದಲ್ಲಿ ಎಂ.ಎಸ್.ಸಿ. ಪಾಸುಮಾಡಿದ ನಾರಾಯಣರಾವ್‌ರು ಪಿಹೆಚ್.ಡಿ ಪದವಿಗಾಗಿ ಘಾಟಿ ಅರಣ್ಯದಲ್ಲಿ ಕಬ್ಬಿಣದ ಅದಿರು ಬಗ್ಗೆ ಸಂಶೋಧನೆ ಕೈಗೊಳ್ಳುವ ಹಂಬಲದ ಜೊತೆಗೆ ಉದ್ಯೋಗದ ಕನಸು ಹೊತ್ತು ಹೋದವರು, ಅರಣ್ಯದಲ್ಲಿನ ರಮ್ಯತೆಯನ್ನು ಸವಿಯುತ್ತಾರೆ. ಅರಣ್ಯ ಶಿಕಾರಿಯಲ್ಲಿನ ಸಾಹಸಿಗರಂತೆ ನಾರಾಯಣರಾವ್‌ರ ಪಾತ್ರವನ್ನು ಬಿಂಬಿಸುತ್ತಾರೆ. ರಾಯರು ಸೂರ್ಯಾಸ್ತಮಾವನ್ನು ಮಹಾಭಾರತದ ಕುರುಕ್ಷೇತ್ರಕ್ಕೆ ಹೋಲಿಸಿದ್ದಾರೆ. ರಕ್ತದಲ್ಲಿ ಮುಳುಗಿದ್ದ ಹಾಗೆ ಮೋಡಗಳು ಕಂಡು ಬರುತ್ತಿವೆ. ಕರ್ಣನ ತಂದೆಯಾದ ಸೂರ್ಯನು ಕುರುಕ್ಷೇತ್ರದಲ್ಲಿನ ಸನ್ನಿವೇಶದಲ್ಲಿ ಮುಳುಗುವ ಹಾಗೆ ಬಿಂಬಿಸುತ್ತಿರುವ ಸಾಲುಗಳು ಗಮನ ಸೆಳೆಯುತ್ತವೆ.

ನಾರಾಯಣರಾವ್ ಅವರು ರಾತ್ರಿಯನ್ನು ಕಾಡಿನಲ್ಲಿ ಕಳೆಯುವ ಸನ್ನೀವೇಶವನ್ನು ಅರಣ್ಯದ ರಮ್ಯವಾದ ಪರಿಸರವನ್ನು ಸೊಗಸಾಗಿ ಚಿತ್ರಿಸುತ್ತಾರೆ. ಎಲ್ಲಿಂದಲ್ಲೋ ಕೇಳಿಸಿದ ಕುದುರೆ ಹೆಜ್ಜೆಯ

ಶಬ್ದವನ್ನು ಕೇಳಿ ಅದರ ಹಿಂದೆ ನಡೆಯುತ್ತಾರೆ. ರಾಯರು ಕುದುರೆ ಸವಾರನನ್ನು ಪುರಾಣ ಪುರುಷನೆಂಬ ಕಲ್ಪನೆಯನ್ನು ಕೊಡುತ್ತಾರೆ. ರಾಯರು ಕುದುರೆಯನ್ನು ಸಾಕಿದ್ದೂ ಅಲ್ಲದೆ ಹಲವಾರು ಕುದುರೆಗಳ ಜಾತಿಗಳನ್ನು ಬಲ್ಲವರು. ಹೀಗಾಗಿಯೇ ಕತೆಯಲ್ಲೂ ಸಹ 'ಮೂಸ್' ಜಾತಿಗೆ ಸೇರಿದ ಕುದುರೆ ಎಂಬುದಾಗಿ ತಿಳಿಸುತ್ತಾರೆ. ಕುದುರೆ ಸವಾರಿಯು ಅವರ ಹವ್ಯಾಸಗಳಲ್ಲಿ ಒಂದಾಗಿತ್ತು. ಕುದುರೆ ಸವಾರನಾದ ಯುವರಾಜನು ತಾವರೆಕೋಟೆಯಲ್ಲಿ . ತನ್ನ ಪ್ರೇಯಸಿ 'ಲಕುಮಿ'ಗಾಗಿ ಹೋಗುವಂತ ಸನ್ನಿವೇಶ ಮತ್ತು ಮಲ್ಲಿನಾಯಕನ ಹೋರಾಟ, ತುರುಕನ ದಾಳಿಯು ಪ್ರಧಾನವಾಗಿ ಚಿತ್ರೀಕರಣವಾಗಿದೆ. ರಾಯರು ಬ್ರಿಟೀಷ್ ಸರ್ಕಾರದ ಹುದ್ದೆಯಲ್ಲಿದ್ದರೂ ಬ್ರಿಟೀಷ್‌ರನ್ನು, ಮುಸ್ಲಿಂರ ಆಡಳಿತವನ್ನು ವಿರೋಧಿಸುವಂತವರಾಗಿದ್ದರು. ಕತೆಯ ವಸ್ತು ಹದಿನೆಂಟನೇ ಶತಮಾನದ್ದಾಗಿದ್ದರಿಂದ ಮುಸ್ಲಿಂರ ದಾಳಿ ಕಳ್ಳತನ, ದರೋಡೆ, ಗ್ರಾಮಗಳಿಗೆ ನುಗ್ಗಿದೋಚುವುದು ನಡೆಯುತ್ತಿದ್ದವು. ರಾಯರು ಮುಸ್ಲಿಂರ ಈ ತರಹದ ಧೋರಣೆಯನ್ನು ವಿರೋಧಿಸುವಂತವರು. ಕತೆಯಲ್ಲೂ ಅವರನ್ನು ವಿರೋಧಿತನವು ವಸ್ತುವಾಗಿದೆ.

ಕತೆಯಲ್ಲಿ ಇಡೀ ತಾವರೆಕೋಟೆಯ ಚಿತ್ರಣವೂ ಹೆಚ್ಚು ಮುಖ್ಯವಾಗಿರುತ್ತದೆ. ತಾವರೆಕೋಟೆಯಲ್ಲಿ ನಡೆದಂತಹ ಪ್ರತಿಯೊಂದು ಸನ್ನಿವೇಶವೂ ಯುದ್ಧದ ಹೋರಾಟವೆಂಬಂತೆ ಭಾಸವಾಗುತ್ತದೆ. ಯುವರಾಜನ ಪ್ರೀತಿಯನ್ನು ಗೆಲ್ಲಿಸುವುದಕ್ಕಾಗಿ ಅವನು ಅಂಗ ರಕ್ಷಕ ಮಲ್ಲನಾಯಕನ ಹೋರಾಟ, ತ್ಯಾಗ ಕತೆಗೆ ಹೆಚ್ಚು ನ್ಯಾಯವನ್ನು ಒದಗಿಸಿದಂತಿದೆ. ನಾರಾಯಣರಾವ್ ಸಹಾ ಮುಸ್ಲಿಂರ ದಾಳಿಯನ್ನು ತಡೆಯುವುದಕ್ಕಾಗಿ ಸುತ್ತಿಗೆಯಿಂದ ಎದುರಾಳಿಗೆ ಒಡೆಯಲು ಮುಂದಾಗುವುದು, ಬೇರೊಬ್ಬನಿಂದ ಗಾಯಗೊಂಡು ಪ್ರಜ್ಞೆ ತಪ್ಪುವುದು ಗ್ರಾಮವಲ್ಲಿ ನಡೆದ ಕತೆಯು ವೈಶಿಷ್ಟ್ಯಪೂರ್ಣವಾಗಿ ಬಂದಿದೆ. ನಾರಾಯಣರಾವ್ ಬೆಳಿಗ್ಗೆ ಎಚ್ಚರವಾದಾಗ ಆ ಹುಡುಗಿ. ಆ ಧೀರ ಅಂಗ ರಕ್ಷಕ, ಆ ಪ್ರೀತಿ ಆ ಧರ್ಮಸಂಕಟ, ಆ ಆತ್ಮತ್ಯಾಗ, ಇವೆಲ್ಲಾ ಬರೀ ಕನಸ್ಸೆ? ಯಾವುದು ಕನಸ್ಸು? ಯಾವುದು ಸತ್ಯ? ಎಂಬ ಗೊಂದಲಕ್ಕೆ ಈಡಾಗುತ್ತಾರೆ. ಇದಲ್ಲದರ ನಡುವೆ ಪರಿಸರದ ಸೊಗಸು ಅವರನ್ನು ಸಮಾಧಾನ ತರಿಸುವಂತಹದ್ದು.

`ತಾವರೆ ಕೋಟೆ` ಮೊದಲು ಪ್ರಕಟವಾದದ್ದು ಜೀವನ ಪತ್ರಿಕೆಯಲ್ಲಿ ೧೯೪೮ರಲ್ಲಿ ನವೋದಯ ಕಾಲದ "ಇಂದಿರೆಯೊ ಅಲ್ಲವೋ?" ಇಂಥ ಕನಸಿನ ಕತೆಗಳಿಗೆ ಮತ್ತು ಈಚೀನ ನವ್ಯಕತೆಗಳಲ್ಲಿಯ ಫ್ಯಾಂಟಸಿಗಳಿಗೆ ನಡುವೆ ನಿಲ್ಲುವ ಕತೆಯಿದು. ನವೋದಯ ಕನಸಿನ ಕತೆಗಳಲ್ಲಿ ವಾಸ್ತವ ಮತ್ತು ಕನಸುಗಳು ಪ್ರತ್ಯೇಕವಾಗಿಯೇ ಇರುತ್ತವೆ. ನವ್ಯ ಕತೆಗಳಲ್ಲಿ ಫ್ಯಾಂಟಸಿ ವಾಸ್ತವದ ಭಾಗವಾಗಿಯೇ ಬರುತ್ತದೆ. 'ತಾವರೆಕೋಟೆ'ಯಲ್ಲಿ ವಾಸ್ತವ ಮತ್ತು ಕನಸುಗಳ ನಡುವಿನ ಗೆರೆಗಳನ್ನು ಅತ್ಯಂತ ಸಹಜ ರೀತಿಯಲ್ಲಿ ಜಾಣತನದಿಂದ ಅಳಿಸಿಹಾಕಿದ್ದಾರೆ. ರಾತ್ರಿ ನಿದ್ರೆಯ ಸಮಯದಲ್ಲಿ ಮರದ ಮೇಲಿಂದ ಬಿದ್ದು ನೋವು ಕಾಣಿಸುತ್ತದೆ. ರಾಯರು ಕಥಾ ರಚನೆಯ ಬಿಗಿ ನಿಲುವು ಎಲ್ಲೂ ನಿರಸವೆಂಬತೆ ಕಂಡು ಬಂದಿಲ್ಲ. ಈ ಕತೆಯ ನಿರೂಪಣಾ ಶೈಲಿ ಅವರಲ್ಲಿನ ಕಥಾ ಸಾಮಾರ್ಥ್ಯವನ್ನು ತೋರಿಸುತ್ತದೆ.

ನಾರಾಯಣರಾವ್‌ರವರು ಕಾಡಿನಿಂದ ಸ್ನೇಹಿತರಾದ ಕರುಣಿಕ ಶೇಷಣ್ಣನ ಮನೆಗೆ ಹೋದರು. ಶೇಷಣ್ಣನವರು ಸ್ಥಳದ ಐತಿಹಾಸಿಕತೆಯ ಬಗ್ಗೆ, ಪುರಾಣಗಳ ಬಗ್ಗೆ, ವಿಶೇಷವಾದ ಜ್ಞಾನವಿದ್ದು,

ವಿಚಾರವನ್ನು ವಿನಿಮಯ ಮಾಡಿಕೊಳ್ಳುತ್ತಿದ್ದವರು. ಶೇಷಣ್ಣನವರು ತಾವರೆ ಕೋಟೆಯ ವಿನಾಶವು ವಿಜಯನಗರ ಮತ್ತು ಬಿಜಾಪುರ ಪಾಳೇಗಾರರ ನಡುವಿನ ಹೋರಾಟಗಳು, ವೈಮನಸ್ಸುಗಳು ತಾವರೆಕೋಟೆ ವಿನಾಶಕ್ಕೆ ಕಾರಣವಾಗುತ್ತವೆ. ಮುಸ್ಲಿಂ ರಾಜಮನೆತನಗಳು, ಮುಸ್ಲಿಂ ಪಾಳೇಗಾರರು ಮಾಡುತ್ತಿದ್ದ ದಾಳಿಗಳಿಂದಾಗಿ ಅನೇಕ ಪಾಳೆಪಟ್ಟುಗಳು ನಾಶವಾಗಿರುವುದು ತಿಳಿದುಬರುತ್ತದೆ. ರಾಮರಾವ್ ಅವರಿಗೆ ಮೈಸೂರಿನ ಭಾಗದಲ್ಲಿ ಅಧಿಕಾರಿಗಳಾಗಿದ್ದವರು. ಹಳ್ಳಿಗಳ ಮೇಲೆ ಇಂತಹ ದಾಳಿಗಳು ನಡೆಯುತ್ತಿದ್ದರಿಂದಲೋ ಮುಸ್ಲಿಂರ ಆಕ್ರಮಣವನ್ನು ವಿರೋಧಿಸುತ್ತಿದ್ದವರು,

ತಾವರೆಕೋಟೆಯ ಹಿನ್ನಲೆಯನ್ನು ಶೇಷಣ್ಣನವರ ಮೂಲಕ ಕತೆಯನ್ನು ಹೇಳಿಸಿದ್ದರೆ ವಿಶಿಷ್ಟತೆ ಪಡೆಯುತ್ತಿತ್ತು. ಮುಸ್ಲಿಂರ ದಾಳಿಯಿಂದಾಗಿ ನಾಶವಾಗಿದ್ದ ಆ ಕೋಟೆಯ ಇತಿಹಾಸವನ್ನು "ಆಷಾಡ ಪಂಚಮಿ, ಬಹುಳ ನಕ್ಷತ್ರದಲ್ಲಿ ಹುಟ್ಟಿದ ವ್ಯಕ್ತಿಯೊಬ್ಬನು ರಾತ್ರಿ ನೀರಿನಲ್ಲಿ ಮುಳುಗಿ ತಾವರೆಕೋಟೆಗೆ ಹೋದರೆ ವಿನಾಶ ಕ್ರಮವನ್ನು ಅರಿಯಬಹುದೆಂದು ಶೇಷಣ್ಣನವರು ಹೇಳುತ್ತಾರೆ. ಕೋಟೆಗೂ ನಾರಾಯಣರಾವ್ ಕನಸ್ಸನ್ನು ಹೇಳದೇ ಹಿನ್ನೆಲೆ ಬಗ್ಗೆಯೂ ನಿರಾಶಕ್ತಿ ತೋರುತ್ತಾರೆ. ಕೋಟೆಗೂ ನಾರಾಯಣರಾವ್‌ರಿಗೂ, ಕನಸಿಗೂ, ಅವರ ಜನ್ಮರಾಶಿಗೂ ಸಂಬಂಧವಿದ್ದಂತೆ ತೋರುತ್ತದೆ. ರಾಮರಾವ್‌ರವರು ಕತೆಯ ಕೊನೆಯಲ್ಲೂ ಕೂತುಹಲವನ್ನು ಉಳಿಸಿಕೊಂಡು ಬರುತ್ತಾರಾದರೂ ಈ ಒಳಸಂಬಂಧದ ಹಿನ್ನೆಲೆಯಲ್ಲಿ ಕಟ್ಟಿಕೊಟ್ಟಿದ್ದರೆ ಕತೆಗೆ ಬೇರೊಂದು ಕೂತುಹಲಕಾರಿ ತಿರುವು ನೀಡಿದಂತಾಗುತ್ತಿತ್ತು. ರಾಮರಾವ್ ಅವರು ಈ ಕತೆಯನ್ನು ಅರ್ಧಕ್ಕೆ ನಿಲ್ಲಿಸಿದರೇನೋ ಎಂದೆನಿಸುತ್ತದೆ. ಕತೆಯ ಕೊನೆಯ ಸನ್ನಿವೇಶವನ್ನು ಮತ್ತಷ್ಟು ವಿಸ್ತೃತಗೊಳಿಸಬೇಕಿತ್ತು. ಕೋಟೆಗೂ ನಾರಾಯಣರಾವ್ ರವರ ಜನ್ಮರಾಶಿಗೂ, ಕನಸಿಗೂ ಸಂಬಂಧಗಳನ್ನು ಕಲ್ಪಿಸಿ ಕತೆಗೆ ವಿಶಿಷ್ಟವಾದ ಮೆರೆಗನ್ನು ನೀಡಬಹುದಾಗಿತ್ತು.

### ೩. ಹೆಣ್ಣುಹೃದಯ

ನವರತ್ನ ರಾಮರಾವ್ ಅವರು ಇಂಗ್ಲೀಷ್ ಭಾಷೆಯಲ್ಲಿ ಅಗಾಧ ಪಾಂಡಿತ್ಯ ಹೊಂದಿದ್ದವರು. ಪಾಶ್ಚಾತ್ಯ ಸಾಹಿತ್ಯದ ಉಪಾಸಕರಾಗಿದ್ದ ರಾಯರು, ಕಾಲೇಜ್ ದಿನಗಳಲ್ಲಿ ಲೇಖನ ಕಾದಂಬರಿಗಳನ್ನು ಇಂಗ್ಲೀಷ್ ಪತ್ರಿಕೆಗಳಲ್ಲಿ ಪ್ರಕಟಿಸಿ ಸಾಹಿತ್ಯಾಸಕ್ತರ ಗಮನಸೆಳೆದಿದ್ದರು. ಇಂತಹ ಪ್ರಭಾವದಿಂದಾಗಿ ರಾಯರ ಹೆಣ್ಣು-ಹೃದಯ ಕಥೆಯನ್ನು ಇಂಗ್ಲೀಷ್‌ನ ಕತೆಯೊಂದನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡತನಕ್ಕೆ ಹೊಂದುವಂತಹ ಕಥಾರಚನೆ, ನಿರೂಪಣೆ, ತಂತ್ರಗಾರಿಕೆಯಲ್ಲಿ ಜಾಣ್ಮೆಯನ್ನು ಮೆರೆದಿದ್ದಾರೆ. ಈ ಕತೆಯಲ್ಲಿ ಹೆಣ್ಣಿನ ಪಾತ್ರವೇ ಪ್ರಧಾನವಾಗಿದ್ದು, ವಾಸ್ತವವಾಗಿ ನಡೆದಿರಬೇಕು ಎನ್ನುವ ಪ್ರಶ್ನೆ ಕಾಡುತ್ತದೆ. ರಾಯರ ಪತ್ನಿಯ ಮೇಲಿದ್ದ ಪ್ರೀತಿ, ನೋವು ಹೆಣ್ಣು-ಹೃದಯ ಕತೆಗೆ ಪ್ರೇರಣೆಯಾಗಿರಬಹುದು. ಕತೆಯುದ್ದಕ್ಕೂ ಭಾವನಾತ್ಮಕ ನಿರೂಪಣೆಯು ಸಹಜವಾಗಿದೆ. ಇಂತಹ ಕಾರಣಗಳಿಂದ ಅವರು ವಿಶಿಷ್ಟವಾಗಿ ನಿಲ್ಲುತ್ತಾರೆ.

ಮೈಸೂರಿನ ಶಿವಪುರ ಗ್ರಾಮದಲ್ಲಿ ನಡೆಯುವ ಕತೆಯಾಗಿದ್ದು, ಹಳ್ಳಿಯ ಯುವಕನನ್ನು ವೈದ್ಯನನ್ನಾಗಿ ಮಾಡುವಲ್ಲಿ ಕುಟುಂಬದ ಶ್ರಮದ ಕತೆಯಾಗಿ ಹೆಣ್ಣು ಹೃದಯದಲ್ಲಿ ನಿರೂಪಿತಗೊಂಡಿದೆ. ಈ ಕಥಾವಸ್ತು ಸ್ವಾತಂತ್ರಪೂರ್ವದ ಹಿನ್ನೆಲೆಯುಳ್ಳದ್ದಾಗಿದ್ದು, ಶಿವಪುರ ಗ್ರಾಮದ ಹಿರಿಯ ಶ್ರೀಮಂತನಾದ ಶಿವಬಸವ ದೇವರು ಮಗನನ್ನು ವೈದ್ಯನನ್ನಾಗಿ ಮಾಡುವ ಕನಸು ಹೊತ್ತವರು. ಜೊತೆಗೆ ಪ್ರೀತಿಯಿಂದ ಸಾಕಿದ ತಂಗಿಯ ಮಗಳಾದ ಶಾಂತಾಳನ್ನು ಬೇರೆ ವರನಿಗೆ ಕೊಟ್ಟು ಮದುವೆ ಮಾಡುವ ಹಂಬಲ. ಶಾಂತಾಳಿಗೆ ರುದ್ರನನ್ನು ಮದುವೆ ಮಾಡಿಕೊಳ್ಳುವ ಆಸೆಯಿದ್ದರೂ, ಹೇಳಿಕೊಳ್ಳಲಾಗದ ಪರಿಸ್ಥಿತಿ ಶತಮಾನಗಳಿಂದಲೂ ಸಂಪ್ರದಾಯಿಕವಾಗಿ ಬಂದ ಬಂಧುತ್ವದ ಭಾಂದವ್ಯದ ಮದುವೆಗೆ ವಿರುದ್ಧವಾಗಿ ಚಿಂತಿಸಿದ ಕ್ರಮ ಮತ್ತು ಶಾಂತಾಳನ್ನು ಬೇರೊಬ್ಬನ ಜೊತೆ ವಿವಾಹ ನಡೆಸಿದ್ದು ಕತೆಯನ್ನು ವಿಶಿಷ್ಟವಾಗಿ ಮುಂದುವರಿಸುವ ತಂತ್ರಗಾರಿಕೆಯಾಗಿ ಕಂಡುಬರುತ್ತದೆ. ಶಾಂತಾಳು ರುದ್ರನನ್ನು ಹೃದಯದ ನಾಯಕನನ್ನಾಗಿ ಮಾಡಿಕೊಂಡವಳಾದರೂ, ಗಂಡನೆಂದು ಹೇಳಿಕೊಳ್ಳುವ ಧೈರ್ಯ ಮಾಡದೆ ಬಂಧನದಲ್ಲಿಸಿಕ್ಕಿ ಹಾಕಿಕೊಳ್ಳುತ್ತಾಳೆ. ಎರಡು ವರ್ಷಗಳ ಸಂಸಾರಿಕ ಜೀವನ ಕೊನೆಗೊಂಡು ತಾರುಣ್ಯದಲ್ಲಿ ವಿಧುವೆಯಾಗಿ ಬಾಳಬೇಕಾಗುತ್ತದೆ.

ರುದ್ರನಿಗೆ ವಿದ್ಯಾಭ್ಯಾಸದ ಹಂಬಲ ಬದುಕನ್ನು ಕಟ್ಟಿಕೊಳ್ಳುವ ಗುರಿಯಿಂದ ವೈದ್ಯಕೀಯ ಪದವಿಗಾಗಿ ಮುಂಬೈಗೆ ಹೋಗುತ್ತಾನೆ. ಶಿವಬಸವ ದೇವರು ಅವರ ಪತ್ನಿಯನ್ನು ಏಕಾಂಗಿತನವನ್ನು ಕಾಡುತ್ತದೆ. ಶಾಂತಾಳ ದಮನೀಯ ಪರಿಸ್ಥಿತಿಯ ಮಧ್ಯೆಯು ಸ್ವಂತ ಬದುಕನ್ನು ಕಟ್ಟಿಕೊಳ್ಳುವ ಹಂಬಲ ಉಳ್ಳವಳಾಗಿದ್ದು, ಬಸವದೇವರ ಆಹ್ವಾನವನ್ನು ನಯವಾಗಿ ತಿರಸ್ಕಿರಿಸುತ್ತಾಳೆ. ರುದ್ರನು ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಲಂಡನ್‌ಗೆ ತೆರಳುವಲ್ಲಿ ಸಿಭಾವಿಯವರು ಸಹಾಯವಾಗುವ ಕನಸನ್ನು ಹೊರುತ್ತಾನೆ. ಸಿಭಾವಿಯ ಮಗಳಾದ ಸರೋಜಿನಿಯನ್ನು ಮದುವೆ ಆಗುವ ಕನಸು ಕಾಣುತ್ತಾನೆ. ಇದರಿಂದಾಗಿ ತನ್ನ ತಂದೆ ತೋರಿಸಿದ ಹೆಣ್ಣನ್ನು ತಿರಸ್ಕರಿಸುತ್ತಾನೆ. ರುದ್ರನಲ್ಲಿ ಸಿಭಾವಿಯಂತಹ ಪ್ರಭಾವಿ ಮನುಷ್ಯರ ಸಹವಾಸ ಬದುಕನ್ನು ಕಟ್ಟಿಕೊಳ್ಳುವ ದೂರದೃಷ್ಟಿ ರುದ್ರನಲ್ಲಿ ತಿರಸ್ಕರಿಸುವಂತಹ ಮನೋಭಾವವನ್ನು ತಾಳುತ್ತಾನೆ.

ಸಿಭಾವಿಯವರು ಚತುರ ವ್ಯಾಪಾರಸ್ಥರು ರುದ್ರನ ವಿದೇಶ ವಿದ್ಯಾಭ್ಯಾಸದ ಖರ್ಚು ಶಿವಬಸವದೇವರಿಗೆ ವಹಿಸಿದ್ದರು. ರುದ್ರ ಸರೋಜನಿ ಮದುವೆ ಪ್ರಸ್ತಾಪವನ್ನು ಒಪ್ಪಿದ್ದರು ಸಿಭಾವಿಯವರಲ್ಲಿ ಸ್ವಾರ್ಥ ಮನಸ್ಸು ಒಪ್ಪುವಂತೆ ಮಾಡುತ್ತದೆ. ಮಗನನ್ನು ಲಂಡನ್‌ಗೆ ಕಳುಹಿಸುವ ಸಂದರ್ಭವು ಬಸವದೇವರಲ್ಲಿ ಸಿಭಾವಿಯವರ ಮೇಲೆ ಕೋಪವೇ ಬರುತ್ತದೆ. ಮಗನನ್ನು ದೂರ ಮಾಡಿರುವುದು ವಯಸ್ಸಾದ ತಂದೆಗೆ ಮಗನ ಆಸರೆ ಬಯಸುವ ಮನೋಭಾವ ಶಿವಬಸವರಲ್ಲಿ ಈ ಕೊರಗು ಉಲ್ಬಣವಾಗುತ್ತದೆ. ಇದ್ದ ಒಬ್ಬ ಮಗನ ವಿದ್ಯಾಭ್ಯಾಸಕ್ಕಾಗಿ ಹಣ ಆಸ್ತಿಯನ್ನೆಲ್ಲಾ ಕಳೆದುಕೊಳ್ಳುತ್ತಾನೆ. ಮಗನ ಆಸೆಯನ್ನು

ಪೂರೈಸುವ ತಂದೆಯಾಗಿ ಬರುವ ಶಿವದೇವರು ವಿಶಿಷ್ಟವಾಗಿ ನಿಲ್ಲುತ್ತಾರೆ. ಮಗನ ಪತ್ರಗಳನ್ನು ಓದಿ ತಮ್ಮ ಜೀವವನ್ನು ಮಗನಿಗಾಗಿ ಕಾಯ್ದುಕೊಂಡಂತೆ ಕಂಡುಬರುತ್ತಾರೆ. ರುದ್ರನು ಇಳಿವಯಸ್ಸಿನಲ್ಲಿ ದೂರವಾದದ್ದು ಶಾಂತಾಳ ವಿಧವೆತನವೂ ಶಿವಬಸವರನ್ನು ಜರ್ಜಿತರನ್ನಾಗಿ ಮಾಡುತ್ತದೆ. ಸಾಲಗಾರರ ಕಾಟದಿಂದ ತಲೆತಪ್ಪಿಸಿಕೊಂಡು ಓಡಾಡುವ ಪರಿಸ್ಥಿತಿ, ಇದ್ದ ಹಣವನ್ನೆಲ್ಲಾ ಮಗನ ವಿದ್ಯಾಭ್ಯಾಸಕ್ಕೆ ಕಳುಹಿಸಿದರು. ಕುಟುಂಬಕ್ಕೆ ಬಡತನವೇ ಅವರನ್ನು ಆವರಿಸಿದಂತಾಯಿತು. ಜಂಗಮ ಮುದುಕನ ಬೇಡಿ ಶಿವಬಸವ ಮತ್ತು ಅವರ ಹೆಂಡತಿಗೆ ಸಮಾಧಾನವನ್ನು ತರುತ್ತಿತ್ತು.

ಮೈಸೂರಿನ ದಸರಾ ಹಬ್ಬದಲ್ಲಿ ಹುಟ್ಟಿ ಹರಡಿದ ಇನ್‌ಪ್ಲ್ಯುಯಿಂಜಾ ರೋಗವು ದೇಶವ್ಯಾಪಿ ಹರಡಿ, ಮೊದಲೇ ಜರ್ಜಿತರಾಗಿದ್ದ ಶಿವಬಸವರಿಗೆ ಹೆಂಡತಿಗೆ ರೋಗ ಕಾಣಿಸಿತು. ನೋಡಿಕೊಳ್ಳಲು ಆಳುಗಳಲ್ಲಿದ ಪರಿಸ್ಥಿತಿ ಆಸರೆಗೆ ಶಾಂತಾಳನ್ನು ಕರೆಸುವ ಮನಸ್ಸು, ರುದ್ರನ ವಿದ್ಯಾಭ್ಯಾಸಕ್ಕೆ ಹಣದ ಕೊರತೆಯಿಂದ ಶಾಂತಳನ್ನು ಕರೆಸುವ ವಿಚಾರದಿಂದ ಸುಮ್ಮನಾಗುತ್ತಾರೆ. ಜಂಗಮರ ಪತ್ರದಿಂದ ಶಾಂತಾಳಿಗೆ ಶಿವಪುರದ ವಾಸ್ತವ ಪರಿಸ್ಥಿತಿ ಅರಿಯುತ್ತಾಳೆ ಅವಳಿಗೆ ಈ ಭೀಕರ ರೋಗ ತಗುಲಿ ನಾದಿನಿ ಆರೈಕೆಯಿಂದ ಚೇತರಿಸಿಕೊಂಡಿದ್ದಾಳೆ. ಅದೇ ರೋಗದಿಂದ ನಾದಿನಿ ಸಾಯುತ್ತಾಳೆ. ಇಂತಹ ಸಂಕಷ್ಟದಲ್ಲಿಯೇ ಅನಾರೋಗ್ಯದಿಂದಲೇ ರುದ್ರನ ಸ್ನೇಹಿತನಾದ ವಕೀಲ ಗೋಪಾಲಯ್ಯನನ್ನು ಬೇಟಿಯಾಗಿ ಅವನೊಂದಿಗೆ ಶಿವಪುರಕ್ಕೆ ಬರುತ್ತಾಳೆ. ಇತ್ತ ಶಿವಬಸವರು ರುದ್ರನ ಪತ್ರಗಳು ಬಾರದೇದ್ದಾರೆ. ಆರೈಕೆಯಿಲ್ಲದೆ ಕಂಗಾಲರಾಗಿ ಶಾಂತಳು ಇವರ ಪರಿಸ್ಥಿತಿ ನೋಡಿ ಬಿಕ್ಕಿ ಬಿಕ್ಕಿ ಅಳುತ್ತಾಳೆ. ಶಿವಬಸವರು ಶಾಂತಳನ್ನು ನೋಡಿ "ಇದು ಕನಸಲ್ಲ ಹಾಗಾದರೆ ಯಮನನ್ನು ನನ್ನ ಪ್ರಾಣಕ್ಕಾಗಿ ಬೇಡಿಕೊಳ್ತಾ ಇದ್ದಳು. ಶಾಂತ ಸತ್ಯವಾನನ ಪ್ರಾಣಕ್ಕಾಗಿಬೇಡುವಂತೆ, ಬಾ ಶಾಂತಾ ಹತ್ತಿರ ಬಾ ಇಲ್ಲಿ ಕೂತುಕೊ, ನನ್ನ ಗಟ್ಟಿಯಾಗಿ ಹಿಡಿದುಕೊ ಅವರೆಲ್ಲಾದರೂ ಮತ್ತೆ ನನ್ನನ್ನು ಎಳೆದುಕೊಂಡು ಹೋದಾರು, ರುದ್ರ ಇಲ್ಲದಿದ್ದರೆ" ಎಂದು ಸುಮ್ಮನಾಗುತ್ತ ಶಾಂತಳನ್ನು ಬಿಟ್ಟು ಹೋಗಬೇಡ ಎನ್ನುತ್ತಾನೆ. ಶಿವಬಸವನಲ್ಲಿ ರುದ್ರನ ಅಗಲಿಕೆ, ರೋಗದ ಬಳಲಿಕೆ, ಅವರನ್ನು ನಿರಾಸೆ ಮೂಡಿಸಿದಂತಾಗುತ್ತದೆ. ಸಾವನ್ನು ಎದುರುನೋಡುವ, ಬೇಸರವನ್ನು ವ್ಯಕ್ತಪಡಿಸುತ್ತಾನೆ. ಶಿವಬಸವರಲ್ಲಿ ರುದ್ರನ ವಿದ್ಯಾಭ್ಯಾಸದ ಜೊತೆಗೆ ಅವನಿಂದಾಗಿ ಬೇಸಾರವು ವ್ಯಕ್ತವಾಗುತ್ತದೆ. ಶಾಂತಳ ಗೌರವ ಪದ ಮನೋಭಾವ ಚಿಕ್ಕಂದಿನಿಂದ ತೋರಿದ ಮಮತೆಗೆ ಶಿವಬಸವರ ಆರೈಕೆ ಮಾಡುತ್ತಾಳೆ. ಇವಳ ಆಗಮನ ಶಿವಬಸವರು ಅವರ ಹೆಂಡತಿಯರಲ್ಲಿ ಮಗನ ಅಗಲಿಕೆಯನ್ನು ದೂರವಾಗಿಸುತ್ತದೆ.

ಶಾಂತಳನ್ನು ನೆನೆದು ಅಳುತ್ತಿದ್ದ ಪಾರ್ವತಮ್ಮನವರು ನಾನು ನಿನ್ನನ್ನು ಮಗಳಂತೆ ಪ್ರೀತಿಸಿದೆ, ಒಂದು ವಿಷಯದಲ್ಲಿ ಮಾತ್ರ ಅನ್ಯಾಯಮಾಡದೆ, ಶಿವನಿಗೆ ಗೊತ್ತು, ಅವನು ನನ್ನನ್ನು ಕ್ಷಮಿಸಬೇಕು, ನೀನು ರುದ್ರನ ಹೆಂಡತಿಯಾಗಿದ್ದರೆ ಎಲ್ಲಾವೂ ಸುಖವಾಗಿರುತ್ತಿತ್ತು" ಎನ್ನುತ್ತಿದ್ದಳು. ಶಾಂತಳ ಮನಸ್ಸಿನಲ್ಲಿ

ಅಡಗಿದ್ದ ನೋವು ಅವಳನ್ನು ಬಿಕ್ಕಿ ಬಿಕ್ಕಿ ಅಳುವಂತೆ ಮಾಡಿತ್ತು. ರೋಗದ ಭೀಕರತೆಗೆ ಪಾರ್ವತಮ್ಮನವರು ತೀರಿಕೊಂಡರು. ದೂರದಲ್ಲಿದ್ದ ರುದ್ರನಿಗೂ ತಿಳಿಸಲಾಗಲಿಲ್ಲ, ರುದ್ರನ ಪತ್ರವ್ಯವಹಾರ ನಿಂತು ಹೋಗಿದ್ದು ಕಾರಣವಾಗಿರಬಹುದು. ಸಹೃದಯಿ ಸ್ತ್ರೀಯಾದ ಶಾಂತಳು ರುದ್ರನ ಕುಟುಂಬವನ್ನು ಮರು ಜೀವ ಬರುವಂತೆ ಮಾಡಿದಳು. ರುದ್ರನ ವಿದ್ಯಾಭ್ಯಾಸದ ಹಣವನ್ನು, ತನ್ನ ಸ್ವಂತ ಹಣವನ್ನು ಕಳುಹಿಸಿದಳು. ಬಸವದೇವರು ಮಾಡಿದ ಸಾಲದ ಭಾರ ರುದ್ರನ ವಿದ್ಯಾಭ್ಯಾಸದ ಭಾರವು ಶಾಂತಳ ಮೇಲೆ ಬಿದ್ದು, ಇಡೀ ಕುಟುಂಬದ ಭಾರವನ್ನೇ ನಿಭಾಯಿಸುವಲ್ಲಿ ಶಾಂತಳ ಸೇವೆ ಅನನ್ಯವಾದದ್ದು.

ರುದ್ರನು ಬದುಕನ್ನು ನಿರ್ಮಿಸಿಕೊಳ್ಳುವಲ್ಲಿ ಯಶಸ್ವಿಯಾದರೂ ಕುಟುಂಬದ ವಿಚಾರದಲ್ಲಿ ಸೋಲುತ್ತಾನೆ. ರುದ್ರನು ಇಷ್ಟಪಟ್ಟ ಸಿಭಾವಿಯವರ ಮಗಳು ಬೇರೊಬ್ಬನೊಂದಿಗೆ ವಿವಾಹವಾಗುತ್ತದೆ. ಖಾಯಿಲೆಯಿಂದ ಗುಣಮುಖರಾದ ತಂದೆಯ ಋಣವನ್ನು ತೀರಿಸುವ ಭಾರ, ಗ್ರಾಮೀಣ ಪ್ರದೇಶಕ್ಕೆ ಸಿಭಾವಿಯವರ ಮಗಳು ಹೊಂದಿಕೊಳ್ಳದೆ ಇರಬಹುದು ಎಂಬ ಚಿಂತನೆಗಳು ಅವನನ್ನು ನೋವಿಗೆ ಗುರಿಮಾಡಲಿಲ್ಲ. ಶಾಂತಾಳ ಶ್ರಮದ ಸಾರ್ಥಕವಾಗಿ ರುದ್ರನು ವೈದ್ಯಕೀಯ ಪದವಿ ಪಡೆದು ಲಂಡನ್‌ನಿಂದ ಹಿಂದಿರುಗುತ್ತಾನೆ. ಹಳ್ಳಿಯಲ್ಲಿ ತನ್ನ ಕುಟುಂಬದನ್ನು ಸ್ಥಿತಿಯನ್ನು ಮತ್ತು ತಂದೆಯನ್ನು ನೋಡಿ ಮರುಗುತ್ತಾನೆ. ಶಾಂತಾಳ ತ್ಯಾಗವು ಅವನಿಗೆ ಸಣ್ಣದೆಂಬಂತೆ ಕಂಡುಬರುತ್ತದೆ. ರುದ್ರನ ಸ್ನೇಹಿತ ವಕೀಲಾ ಗೋಪಾಲಯ್ಯನ ಬುದ್ಧಿವಾದದಿಂದ ಶಾಂತಾಳ ತ್ಯಾಗವನ್ನು ಅರಿಯುತ್ತಾನೆ.

ಉನ್ನತ ವಿದ್ಯಾಭ್ಯಾಸ ಮಾಡಿದ ರುದ್ರನು ಸಣ್ಣತನವನ್ನು ಪ್ರದರ್ಶಿಸುತ್ತಾನೆ. ಶಾಂತಾಳನ್ನು ಗೋಪಾಲನಿಗೆ ಹೋಲಿಸಿ ಮಾತನಾಡಿ ಅವರ ಘನತೆಯನ್ನು ಕಡಿಮೆ ಮಾಡಿಕೊಳ್ಳುತ್ತಾನೆ. ಶಾಂತಳ ಸ್ವಾರ್ಥರಹಿತ ಸೇವೆ ರುದ್ರನ ಮೇಲೆ ಪ್ರೀತಿ ಕುಟುಂಬದ ಮೇಲಿನ ಗೌರವ, ಕುಟುಂಬವನ್ನೇ ಅಪಾಯದಿಂದ ಪಾರು ಮಾಡಿದಲ್ಲದೆ, ರುದ್ರನ ಪರಿಪೂರ್ಣ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿ ನಿಲ್ಲುತ್ತಾಳೆ. ರಾಯರು ಇಡೀ ಕತೆಯನ್ನು ಭಾವನಾತ್ಮಕ ನಿರೂಪಣೆಯಲ್ಲಿ ಬರೆದಿದ್ದಾರೆ. ಕತೆಯ ಭಾಷೆಯ ಮೈಸೂರು ಭಾಗದ ಆಡು ಮಾತಿನಲ್ಲಿ ನಿರೂಪಣೆಗೊಂಡಿದೆ. ಕತೆಯ ಕಾಲವೂ ಹದಿನೆಂಟನೇಯ ಶತಮಾನವನ್ನು ಗುರುತಿಸುತ್ತದೆ. ಭೀಕರವಾದ ಖಾಯಿಲೆ ಕೆಲವೊಮ್ಮೆ ಹಳ್ಳಿಗಳಿಗೆ ಹರಡುತ್ತಿದ್ದು ಸಹಜವಾಗಿತ್ತು. ಇಂತಹ ಖಾಯಿಲೆಗಳಿಂದ ತತ್ತರಿಸಿದ ಹಳ್ಳಿಗಳನ್ನು ಈಗಲೂ ಕಾಣಬಹುದಾಗಿದೆ. ರಾಯರು ಹೆಣ್ಣೊಬ್ಬಳ ಸೇವೆ ಮತ್ತು ತ್ಯಾಗದ ಮಾನಸಿಕ ತೊಳಲಾಟಗಳಲ್ಲಿ ಜೀವನ ಸಾಗಿಸುವಂತಹದ್ದು, ಸಾಹಿತ್ಯದಲ್ಲಿ ಸ್ತ್ರೀಯನ್ನು ಪ್ರಧಾನವಾಗಿಟ್ಟುಕೊಂಡು ಕತೆ ರಚಿಸುವಾಗ ಸ್ತ್ರೀಯನ್ನು ಶೋಷಣೆಗೊಳಪಡಿಸಿರುವುದೇ ಹೆಚ್ಚಾಗಿ ಕಂಡುಬರುತ್ತದೆ. ರಾಯರು ಕತೆಯಲ್ಲಿ ಸ್ತ್ರೀಯ ಶೋಷಣೆಯಂತೆ ಕಂಡುಬರುವುದಿಲ್ಲ. ಶಾಂತಳು ರುದ್ರನನ್ನು ಹೃದಯ ನಾಯಕನನ್ನಾಗಿಸಿದ್ದು ಮನಸ್ಸಿನಲ್ಲಿಯೆ ಆರಾಧಿಸಿ ಹೇಳಿಕೊಳ್ಳದ ಭಾವನೆಗಳನ್ನು ಶಿವಬಸವ ದೇವರು ಪಾರ್ವತಮ್ಮನವರು ಅರೆಯದೇ ಕೊಂಡಿ ಹಾಕುವ ಧೋರಣೆಯಂತೆ ಕಂಡುಬರುತ್ತದೆ. ಪಾರ್ವತಮ್ಮನವರು ಮಗಳಂತೆ ಸಾಕಿದ್ದು ವಿರುದ್ಧದ ನಿರ್ಧಾರಕ್ಕೆ ಕಾರಣವಾಗಿದೆ.

"ರಾಯರು ಶಾಂತಳನ್ನು ಪ್ರಧಾನ ಪಾತ್ರವಾಗಿಟ್ಟುಕೊಂಡು ರಚಿಸಿದ್ದಾರೆ. ಒಳ್ಳೆ ಹೆಣ್ಣಿನ ಹೃದಯ ಒಳ್ಳೆ ಹಣ್ಣಿನ ಹೃದಯದಂತಿದೆ" ಎಂಬ ಸಾಲು ಇಡೀ ಕತೆಯನ್ನು ಕಟ್ಟಿಕೊಟ್ಟಿದೆ. ರುದ್ರನ ವಿದ್ಯಾಭ್ಯಾಸವೇ ಕತೆಯ ವಸ್ತುವಾದರೆ ಅವನ ಯಶಸ್ಸಿದಾರಿಗೆ ಶಾಂತ ದೀಪವಾಗುತ್ತಾಳೆ. ಹೆಣ್ಣು-ಹೃದಯ ಕತೆಯು ಹಳ್ಳಿಗಾಡಿನ ಯುವಕರ ಆಧುನಿಕ ಬದುಕನ್ನು ಕಟ್ಟಿಕೊಳ್ಳುವ ಸಲುವಾಗಿ ಸಂಬಂಧಗಳನ್ನು ಮೂಲೆಗುಂಪಾಗಿಸುವ ಚಿತ್ರಣ ಸಾಮಾನ್ಯವಾಗಿದ್ದು. ರಾಯರ ಈ ಕತೆಯಲ್ಲಿ ಸಂಬಂಧಗಳನ್ನು ಬೆಸೆಯುವ ಕೆಲಸಮಾಡಿದ್ದಾರೆ. ನಮ್ಮ ಸಂಸ್ಕೃತಿಯಲ್ಲಿ ವಿಧವ ವಿವಾಹ ಸಂಪ್ರದಾಯಗಳಲ್ಲಿ ವಿರೋಧಗಳಿದ್ದರೂ ಶಾಂತಳನ್ನು ರುದ್ರನು ವರಿಸಿದ್ದು ವಿಶೇಷವೆನಿಸುತ್ತದೆ. ಅನೇಕ ಕತೆಗಳಲ್ಲಿ ವಿಧವೆಯೊಬ್ಬಳನ್ನು ಅನೈತಿಕ ಸಂಬಂಧಗಳಿಗೆ ಗುರಿಮಾಡಿರುವುದು ಕಂಡಬರುತ್ತದೆ. ರಾಯರು ವಿಧವೆಯನ್ನೇ ಕಥಾ ನಾಯಕಿಯನ್ನಾಗಿ ಮಾಡಿದ್ದು ಇಡೀ ಕತೆಯ ಪ್ರಧಾನ ಪಾತ್ರವಾಗಿ ನಿಲ್ಲುತ್ತಾಳೆ. ರಾಯರಲ್ಲಿ ಹೊಸತನದ ಕತೆಯ ಹುಟ್ಟನ್ನು ಹಾಕಿಕೊಟ್ಟಿದ್ದಾರೆ. ಶಿವಬಸವದೇವರು ಕತೆಯಲ್ಲಿ ಅಸಹಾಯಕರಾಗಿ ನಿಲ್ಲುತ್ತಾರೆ. ರಾಯರು ಒಂದು ಕುಟುಂಬದಲ್ಲಿ ನಡೆದ ಘಟನೆಗಳನ್ನು, ಸಂಬಂಧಗಳ ತೊಳಲಾಟವನ್ನು, ಸ್ತ್ರೀಯೊಬ್ಬಳ ಮನಸ್ಥಿತಿಯನ್ನು, ವಿದ್ಯಾವಂತನ ಭವಿಷ್ಯವನ್ನು ಕತೆಯ ಸಾರವಾಗಿಸಿಕೊಂಡು ಕತೆಗೆ ವಿಶೇಷವಾದ ಸೊಬಗನ್ನು ನೀಡುತ್ತ ಹೋಗುತ್ತಾರೆ.

ರಾಯರು ಇಂಗ್ಲೀಷ್ ಕತೆಯ ನೆರಳನ್ನು ತೆಗೆದುಕೊಂಡಿದ್ದರೂ ಇಡೀ ಕತೆಯನ್ನು ಗಮನಿಸಿದಾಗ ಕನ್ನಡದ ನೆಲವನ್ನೇ ನೆಚ್ಚಿಕೊಂಡು ಬಗೆದಿದ್ದಾರೆ. ಮೈಸೂರು ಪ್ರದೇಶ ಅವರಿಗೆ ಹೆಚ್ಚು ಪ್ರಿಯವಾದದ್ದಾಗಿದ್ದೂ ಅವರ ನಾಲ್ಕು ಕತೆಗಳು ಮೈಸೂರು ಭಾಗದಲ್ಲಿನ ವಸ್ತುಗಳೇ ಕತೆಗಳಾಗಿವೆ. ರಾಯರ ಈ ಹೆಣ್ಣುಹೃದಯ ಕತೆಯು ಅವರ ಜೀವನದಲ್ಲಿ ಹೆಣ್ಣಿಗೆ ಕೊಟ್ಟಂತಹ ಸ್ಥಾನ-ಮಾನಗಳನ್ನು ನೆನಪಿಸುವಂತೆ ಮಾಡುತ್ತವೆ. ರಾಯರ ಪತ್ನಿಯರು ತೋರಿದ ಪ್ರೀತಿ, ಸೇವೆಗಳು ಈ ಕತೆಯನ್ನು ಬರೆಯಲು ಕಾರಣವಾಗಿರಬಹುದಾಗಿದೆ. ರಾಯರ ಈ ಕತೆಯು ವಾಸ್ತವವೋ, ಕಲ್ಪನೆಯೋ ಎಂಬ ಚರ್ಚೆಗೆ ಗ್ರಾಸವಾಗುವಂತೆ ಮಾಡುತ್ತದೆ.

**೪. ತಕ್ಸೀರು**

ರಾಮರಾವ್ ಅವರು ಕನ್ನಡ ಸಾಹಿತ್ಯಕ್ಕೆ ನೀಡಿದ ಕೊಡುಗೆಗಳು ಅನನ್ಯವಾದವುಗಳು. ತಮ್ಮ ವೃತ್ತಿ ಬದುಕಿನ ಅನುಭವಗಳನ್ನು ಸಾಹಿತ್ಯದ ರೂಪದಲ್ಲಿ ಹಂಚಿಕೊಂಡವರು. ರಾಯರ ಅಧಿಕಾರಾವಧಿಯ ಅನೇಕ ಕಾರ್ಯಗಳು ಅವರನ್ನು ಕತೆಗಾರರಾಗಿ, ಲೇಖನಕಾರರಾಗಿ, ಸಾಹಿತ್ಯಸಕ್ತರನ್ನಾಗಿ ಮಾಡುವಲ್ಲಿ ಪ್ರೇರಣೆ ನೀಡಿದ್ದವು. ಇಂತಹ ಪ್ರೇರಣೆಯಿಂದಲೇ 'ತಕ್ಸೀರು' ಕತೆಯನ್ನು ಬರೆದಿದ್ದಾರೆ. ಈ ಕತೆಯು ದಕ್ಷ ಅಧಿಕಾರಿಯೊಬ್ಬನ ಕಾರ್ಯನಿರ್ವಹಣೆ, ದಕ್ಷತೆಯಿಂದಾದ ಕಾನೂನಿನ ತೊಡಕುಗಳು, ಮಾನಸಿಕ ತೊಳಲಾಟಗಳನ್ನು ತಿಳಿಯಪಡಿಸುತ್ತದೆ. ಮೈಸೂರು ರಾಜಮನೆತನದ ಸಾಂಪ್ರದಾಯಿಕ ಕಾನೂನು ಮತ್ತು ಬ್ರಿಟೀಷರ ಕಾನೂನು ನಡುವಿನ ವ್ಯಾತ್ಯಾಸದಿಂದ ಉಂಟಾದ ಸಮಸ್ಯೆಯನ್ನು ಕತೆಯನ್ನಾಗಿಸಿದ್ದಾರೆ. ಅವರ

ಕತೆಗಳಲ್ಲಿ ಭಿನ್ನವಾದ ನಿರೂಪಣೆ, ತಂತ್ರಗಾರಿಕೆಯು ಕತೆಗಳಲ್ಲಿನ ತಿರುವುಗಳು ಕತೆಯ ಬಗೆಗೆ ಓದುಗರಿಗೆ ಕುತೂಹಲಕಾರಿಯಾಗಿಸುತ್ತವೆ.

ರಾಯರ ತಕ್ಕೀರು ಕತೆಯು ಹದಿನೆಂಟನೆ ಶತಮಾನದ ಕತೆಯಾಗಿದ್ದು, ಆ ಕಾಲದ ವಾಸ್ತವತೆಯನ್ನು ಕತೆಯ ಮೂಲಕ ಕಟ್ಟಿಕೊಟ್ಟಿದ್ದಾರೆ. ಮೈಸೂರು ಜಿಲ್ಲೆಯ ಗಡಿನಾಡ ಗ್ರಾಮವಾದ ಚಿಂತಮಂಗಲದಲ್ಲಿ ದರೋಡೆಗಳನ್ನು ಮಾಡುವುದು ಅದರ ಪ್ರತಿಫಲವನ್ನು ಕತೆಯ ವಸ್ತುವಾಗಿರಿಸಿಕೊಂಡಿದ್ದಾರೆ. ಬ್ರಿಟೀಷರ ಆಗಮನವು ದೇಶದಲ್ಲಿ ರಾಜಕೀಯ ಅಸ್ಥಿರತೆ ಉಂಟಾಗಿದ್ದು ಗಡಿ ಪ್ರದೇಶಗಳಲ್ಲಿ ದರೋಡೆ ಮತ್ತು ಕಳ್ಳತನವು ಅಧಿಕವಾಗಿ ನಡೆಯುತ್ತಿದ್ದವು. ಬ್ರಿಟೀಷರ ಆಡಳಿತ ನೀತಿ, ರಾಜ ಮನೆತನಗಳ ದೌರ್ಬಲ್ಯ ಮುಂತಾದ ಕಾರಣಗಳಿಂದ ಕಳ್ಳತನ, ದರೋಡೆಗಳು ಸಹಜವೆಂಬಂತಾಗಿದ್ದವು. ಇಂತಹ ದುಷ್ಕೃತ್ಯಗಳನ್ನು ನಡೆಸುವವರನ್ನು 'ಪಂಜುಕಳ್ಳ'ರೆಂದು ಕರೆಯುವ ವಾಡಿಕೆಯಿತ್ತು. ಈ ಪಂಜುಕಳ್ಳರು ದರೋಡೆ ಸಂದರ್ಭದಲ್ಲಿ ವಿರೋಧಿಸುವವರನ್ನು ಸಿದವರಿಗೆ ಅನೇಕ ಚಿತ್ರ ಹಿಂಸೆಗಳನ್ನು ಕೊಡುತ್ತಿದ್ದರು. ಆಯುಧ ಪ್ರಿಯರಾದ ಇವರು ಕತ್ತಿ, ಕೊಡಲಿ, ಬಂದೂಕುಗಳು ಇರುತ್ತಿದ್ದವು. ಈ ದರೋಡೆಕೊರರ ಹಿಂದೆ ಮರಾಟೆ ಅಥವಾ ಪಿಡಾರೆ ಗುಂಪುಗಳ ಸಹಾಯದಿಂದ ದಾಳಿ ಮಾಡಿ ಗ್ರಾಮಗಳನ್ನು ಬರಿದುಮಾಡಿ ಗುಡಿಸಲುಗಳಿಗೆ ಬೆಂಕಿ ಹಚ್ಚಿ ಹೋಗುತ್ತಿದ್ದರು. ಇಂತಹ ದರೋಡೆಗಳಿಗೆ ದಕ್ಷ ಅಧಿಕಾರಿಗಳ ಕೊರತೆಯು ಕಾರಣವಾಗಿತ್ತು.

ಚಿಂತಮಂಗಲಕ್ಕೆ ಬಂದಂತಹ ಸುಬೇದಾರರಾದ ಜಯರಾಯರು ದಕ್ಷ ಅಧಿಕಾರಿಯೆಂದೆ ಹೆಸರುವಾಸಿಯಾಗಿದ್ದವರು. ಬಲಿಷ್ಠವಾದ ದೇಹವುಳ್ಳ ಜಯರಾಯರು ಉಪಕಾರ ಮನೋಭಾವದವರಾಗಿದ್ದರು.ರಾಮರಾವ್‌ರಲ್ಲಿ ಅಂಗಸೌಷ್ಠವಾದ ಮೇಲಿನ ಆಸಕ್ತಿಯಿಂದಾಗಿ ಪ್ರತಿ ಕತೆಯಲ್ಲಿಯೂ ದೇಹದ ದಾರ್ಢ್ಯತೆ ಬಗ್ಗೆ ಮತ್ತೆ ಮತ್ತೆ ಬರೆದುಕೊಂಡಿರುವುದು ತಿಳಿದುಬರುತ್ತದೆ. ಒಂದು ಅಮವಾಸ್ಯೆಯ ದಿನ ಚಿಂತಮಂಗಲದಲ್ಲಿ ರಾತ್ರಿ ವೇಳೆ ದರೋಡೆಕೊರರು ಕೊಲಾಹಲವನ್ನೇ ಸೃಷ್ಟಿಸಿದರು. ಸುಬೇದುದಾರರಿಗೆ ಈ ವಿಷಯ ತಿಳಿದು ಶಾಸ್ತ್ರಸ್ತ್ರಗಳೊಂದಿಗೆ, ಪೋಲಿಸರು ಕಿಲ್ಲೇದಾರರನ್ನು ಕರೆಹಿಸಿಕೊಂಡು ಗ್ರಾಮದ ಮುಸ್ಲಿಂ ಕೇರೆಗೆ ದೌಡಯಿಸುತ್ತಾರೆ. ಇಂತಹ ದರೋಡೆಗಳನ್ನು ಸುಬೇದದಾರರೇ ಅತ್ತಿಕ್ಕುವುದು ಅವರ ಕಾರ್ಯವಾಗಿತ್ತು. ದರೋಡೆಕೋರರನ್ನು ಎದುರು ಹಾಕಿಕೊಳ್ಳುವುದು ಸುಲಭದ ಕಾರ್ಯವಾಗಿರಲಿಲ್ಲ. ಕತ್ತಿ, ಕುಡುಗೋಲಿನಂತಹ ಆಯುಧಗಳಿಂದ ಗ್ರಾಮಗಳಿಗೆ ನುಗ್ಗುವುದು, ಮನೆಗಳಲ್ಲಿ ತುರಿ ಕಳ್ಳತನ ಮಾಡುವುದು, ವಿರೋಧಿಸುವವರನ್ನು ಗಂಭೀರವಾಗಿ ಹಲ್ಲೆಗೆ ಒಳಪಡಿಸುವುದು, ಗುಡಿಸಲುಗಳಿಗೆ ಬೆಂಕಿ ಹಚ್ಚಿಹೋಗುವುದು ಸಾಮಾನ್ಯವಾಗಿದ್ದವು. ರಾಮರಾಯರು ಅಮಲ್‌ದಾರರಾಗಿದ್ದ ಸಂದರ್ಭದಲ್ಲಿ ಎಡೆತೊರೆ, ಚೆನ್ನಪಟ್ಟಣ, ಶ್ರೀನಿವಾಸಪುರ ಮುಂತಾದ ಗ್ರಾಮಗಳಲ್ಲಿ ದರೋಡೆಕೊರರ ಹಾವಳಿಯನ್ನು ಎದುರಿಸಿದವರಾಗಿದ್ದು ಇಂತಹ ಅನುಭವಗಳನ್ನು ತಮ್ಮ 'ಕೆಲವು ನೆನಪುಗಳು' ಎಂಬ ಪುಸ್ತಕದಲ್ಲಿ ದಾಖಲಿಸಿಕೊಂಡಿದ್ದಾರೆ. ರಾಯರು ಅನುಭವವುಳ್ಳವರಾಗಿದ್ದರಿಂದಲೇ ಅಂತಹ ದರೋಡೆಗಳ ಮೇಲೆ ಕತೆಯನ್ನು ನಿರೂಪಿಸುವುದರಲ್ಲಿ ವಿಶೇಷತೆಯನ್ನು ತೋರಿದ್ದಾರೆ.

ಜಯರಾಯರು ಧೈರ್ಯವಂತರಾಗಿದ್ದರು ಸ್ವತಃ ಆಯುಧಗಳನ್ನು ಹಿಡಿದುಕೊಂಡು ಜನಗಳಿಗೆ "ನಾವು ಹೋಗಿ ಆ ಪಂಜುಗಳ್ಳರಿಗೆ ತಕ್ಕ ಶಿಕ್ಷೆ ಮಾಡಿಸುತ್ತೇವೆ. ನಿರ್ಭೀತರಾಗಿ ಮನೆಗಳಿಗೆ ಹೋಗಿ, ನಿಮಲ್ಲಿ ಛಾತಿಯಿದ್ದರೆ ಬರಬಹುದು ಮಹಾರಾಜರ ಅನ್ನದ ಋಣ ತೀರಿಸಿ ದೇವರ ಕೃಪೆಯಿಂದ ಅವರಿಗೆ ತಕ್ಕದಾದ ಶಿಕ್ಷೆಯನ್ನು ಕೊಡುತ್ತೇವೆ ಎಂದು ಹೇಳಿ ಹೊರಡುತ್ತಾರೆ. ಗ್ರಾಮದ ಅಂಗಡಿ ಬೀದಿಗಳಲ್ಲಿ ಕಗ್ಗತ್ತಲೆ ನಿಶ್ಯಬ್ದದ ವಾತವರಣ ಆವರಿಸಿತ್ತು. ಮುಸಲ್ಮಾನರ ಕೇರೆಯ ಕಡೆಗೆ ದಟ್ಟವಾದ ಕೆಂಬೆಳಕು ಜನರ ಕೂಗು, ಮರಮಟ್ಟುಗಳು, ಗುಡಿಸಲುಗಳು ಸುಟ್ಟು ಚಟಪಟಿ ಎನ್ನುವ ದೃಶ್ಯ ಜನಗಳ ಸುಳಿವು ಇಲ್ಲದಾಗಿದೆ. ದರೋಡೆಕೋರರು ಸತ್ತಾರ್‌ಸಾಬ್ ಮನೆಯ ಸುತ್ತಲು ತಂಗಿದ್ದ ವಿಷಯ ತಿಳಿದು, ಜಯರಾಯರು ಹಲವಾರು ಜನರ ಸಹಾಯದಿಂದ ಅವರನ್ನು ಸುತ್ತುವರೆದರು. ದಫೇದಾರ್ ಬೋರನಾಯಕನು ಮಷಾಲಿ ಮಾದನೆಂಬ ಪಂಜುಗಳ್ಳನನ್ನು ಹಿಡಿಯುತ್ತಾನೆ. ಒಟ್ಟಿನಲ್ಲಿ ಮೂವರು ಪಂಜುಗಳ್ಳರು ಸೆರೆಸಿಕ್ಕು ಸತ್ತಾರ್‌ಖಾನ್ ಮತ್ತು ಅವನ ಹೆಂಡತಿ ಪ್ರಾಣಾಪಾಯದಿಂದ ಪಾರಾಗುತ್ತಾರೆ. ಸಮಯಕ್ಕೆ ಸರಿಯಾಗಿ ಬಂದಿದ್ದರಿಂದಲೇ ಕಳ್ಳತನವೇನೂ ಆಗಿರಲಿಲ್ಲ. ಗ್ರಾಮದ ಜೋದಿಶಾಲ್ ಗುಮಾಸ್ತರ ಬಳಿ ಕಾನೂನಿ ರೀತಿಯಲ್ಲಿ ಶಿಕ್ಷೆಯನ್ನು ಕೊಡಬೇಕು ಎಂದಾಗ ಗುಮಾಸ್ತರು ಖೂನಿ ಮಾಡಿದವರಿಗೆ ಗಲ್ಲು ಶಿಕ್ಷೆ ವಿಧಿಸಬೇಕು" ಎನ್ನುತ್ತಾರೆ. ಈ ಶಿಕ್ಷೆಯು ಮೈಸೂರು ರಾಜಮನೆತನದ ಆಡಳಿತದಲ್ಲಿ ಸಾಂಪ್ರದಾಯಿಕವಾಗಿ ಬಂದಂತಹ ಕಾನೂನು ಆಗಿದೆ. ಸೂಕ್ಷ್ಮ ಮನಸ್ಸು ಹೊಂದಿದ್ದ ಜಯರಾಯರು ಮೂಲತಃ ಅಹಿಂಸಾವಾದಿಗಳು ಮಹಾರಾಜರ ಅನ್ನದ ಋಣ ಮತ್ತು ಕರ್ತವ್ಯದ ನಿಷ್ಠೆ ಎರಡೂ ಸಾರಿ ತಪ್ಪಿತಸ್ಥರಿಗೆ ಕಠಿಣ ಶಿಕ್ಷೆಯಾಗದೆ ಗ್ರಾಮಗಳಲ್ಲಿ ದರೋಡೆ ನಿಲ್ಲದು ಎಂಬ ನಿಲುವಿನಿಂದಾಗಿ ಜಯರಾಯರು ಮಷಾಲ ಮಾದನಿಗೆ ಗಲ್ಲುಶಿಕ್ಷೆಯನ್ನು ನೀಡಿದರು.

ಜಯರಾಯರ ಈ ದಿಟ್ಟ ನಿರ್ಧಾರವು ಗ್ರಾಮಸ್ಥರಲ್ಲಿ ಸಂತಸದ ವಾತಾವರಣವೇ ಆವರಿಸಿ ಜಯರಾಯರಿಗೆ ಜೈಕಾರ ಹಾಕಿದರು. ಹೊಗಳಿಕೆಯ ಮಾತುಗಳಿಂದ ಜಯರಾಯರಲ್ಲಿ ಆತ್ಮವಿಶ್ವಾಸ ಹಿಮ್ಮಡಿಗೊಂಡಿತು. ಈ ಪ್ರಕರಣದ ಸಂಪೂರ್ಣ ವಿವರವನ್ನು ಜಯರಾಯರು ಬೆಂಗಳೂರಿನ ಸೂಪರಿಡೆಂಟ್ ಮಂಗಾಮಾರಿ ಸಾಹೇಬರಿಗೆ ತಿಳಿಸುತ್ತಾರೆ. ಸಾಹೇಬರು ಬ್ರಿಟೀಷರ ಆಡಳಿತ ನೀತಿಗೆ ಒಳಪಟ್ಟವರಾಗಿದ್ದರಿಂದ ಇದು ಬ್ರಿಟೀಷ್ ಕಾನೂನಿಗೆ ವಿರೋಧತನದ ನಿರ್ಧಾರವೆಂತಲೂ ಈ ಪ್ರಕರಣ ಅವರಿಗೆ ಗಾಬರಿಯನ್ನುಂಟುಮಾಡಿತು. 'ಯಾರ ಸಂಗಡ ಹೇಳಬೇಡಿ, ಸಿದ್ಧವಾಗಿ ಚಿಂತಮಂಗಲಕ್ಕೆ ಹೋಗೋಣ ಎಂದು ತಿಳಿಸಿ, ಸಹಾಯಕರೊಂದಿಗೆ ಹೋದಾಗ ಮಾದವನ ನೇತಾಡುವ ಹೆಣವನ್ನು ಕಾಣುತ್ತಾರೆ. ಗ್ರಾಮಸ್ಥರು ಜಯರಾಯರ ಕಾರ್ಯವೈಖರಿಯ ಬಗ್ಗೆ ಗುಣಗಾನವನ್ನೇ ಮಾಡುತ್ತಾರೆ. ಮಂಗಾಮಾರಿಯವರಲ್ಲಿ ಅಸಮಾಧಾನದ ಹೊಗೆ ಕಾಣುತ್ತಿತ್ತು. ಏನು ಸುಬೇದುದಾರರೇ, ಎಂಥ ಕೆಲಸ ಮಾಡಿಬಿಟ್ಟಿರಲ್ಲ! ಕೊಲೆ ಮಾಡಿಬಿಟ್ಟಿರಲ್ಲ! ಕಳ್ಳನಿಗೆ ಆದ ಶಿಕ್ಷೆಗೆ ಕಾನೂನು ಪ್ರಕಾರ ನೀವೂ

ಗುರಿಯಾದಿರಲ್ಲ ಎಂದ ಮಾತಿಗೆ ಜಯರಾಯರು ಬೆಚ್ಚಿಬಿದ್ದರು. ಆ ಶಿಕ್ಷೆಯನ್ನು ಸ್ವಾಗತಿಸಿದರು ಕಾರಣ ಅಂದು ರಾಜಮನೆತನಗಳು ಸಂಪೂರ್ಣವಾಗಿ ಸ್ವತಂತ್ರವಾಗಿರಲಿಲ್ಲ ಮತ್ತು ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿದ್ದರಿಂದ ಬ್ರಿಟೀಷರು ರಚಿಸಿದ ಕಾನೂನುಗಳೇ ಇಲ್ಲಿ ಅನ್ವಯವಾಗುತ್ತಿದ್ದವು. ಸಾಂಪ್ರದಾಯಿಕವಾಗಿ ಬಂದಂತಹ ಕಾನೂನು ಮತ್ತು ಬ್ರಿಟೀಷರ ಕಾನೂನಿನ ಮಧ್ಯೆ ಅಧಿಕಾರಿಗಳು ಕಂಗಲಾಗಿದ್ದ ಸಮಯದಲ್ಲಿ ಜಯರಾಯರ ಈ ನಿರ್ಧಾರ ಬ್ರಿಟೀಷ್ ನೀತಿಗೆ ವಿರೋಧವಾಗಿತ್ತು. ಹಾಗಾಗಿಯೇ ರಾಯರು ಈ ಶಿಕ್ಷೆಗೆ ಗುರಿಯಾಗುವ ಸನ್ನಿವೇಶ ಬಂದಿತು. ರಾಯರಿಗೆ ಮೈಸೂರು ರಾಜಮನೆತಕ್ಕೆ ಸೇರಿದ ಮಹಾರಾಜರಿಗೆ ನಿಷ್ಠೆಯನ್ನು ತೋರುವ ಮನೋಭಾವ. ಆದರೆ ಯಾವುದನ್ನು ಅಳವಡಿಸಬೇಕು ಎಂಬುದು ಆ ಕಾಲಕ್ಕೆ ಬಹುದೊಡ್ಡ ಸವಾಲಾಗಿತ್ತು.

ನವರತ್ನ ರಾಮರಾವ್ ಅವರು ಬ್ರಿಟೀಷರ ಇಂಗ್ಲೀಷ್ ವ್ಯಾಮೋಹ, ಅವರ ರಾಜಕೀಯ ನೀತಿಗೆ ಒಳಪಟ್ಟರೂ ಮೈಸೂರು ಮಹಾರಾಜರಿಗೆ ನಿಷ್ಠೆಯನ್ನು ತೋರುತ್ತಿದ್ದವರು. ಬ್ರಿಟೀಷರ ಹಲವಾರು ನೀತಿಗಳನ್ನು ವಿರೋಧಿಸುವ ಮನೋಭಾವವು ರಾಯರಲ್ಲಿ ಕಂಡುಬರುತ್ತಿತ್ತು. ಬ್ರಿಟೀಷರ ಆಡಳಿತ ನೀತಿಯಲ್ಲಿ ಒಬ್ಬರಾಗಿದ್ದರೂ ಸಹ ರಾಯರಲ್ಲಿ ದೇಶಿಯ ಚಿಂತನೆಗಳು ಹೆಚ್ಚಾಗಿದ್ದರಿಂದಲೇ ಬ್ರಿಟೀಷರ ಆಡಳಿತವು ರಾಯರಿಗೆ ಅಸಮಾಧಾನವನ್ನು ತರುತ್ತಿತ್ತು. ಮೈಸೂರು ರಾಜರಿಗೆ ನಿಷ್ಠೆಯನ್ನು ಹೊಂದಿದ್ದವರಾಗಿ, ಮಹಾರಾಜರ ಅನ್ನದ ಋಣದಲ್ಲಿ ಇರುವುದಾಗಿ ಹೇಳಿಕೊಂಡಿರುವುದು ತಿಳಿದುಬರುತ್ತದೆ. ರಾಯರು ಇಂತಹ ಸಂದಿಗ್ಧತೆಯನ್ನು ತಮ್ಮ ತಕ್ಸೀರು ಕತೆಯಲ್ಲಿ ವ್ಯಕ್ತಪಡಿಸುವ ಮೂಲಕ ತಮ್ಮ ಮನೋಭಾವವನ್ನು ತೋರಿದ್ದಾರೆ.

ಮಂಗಾಮಾರಿ ಸಾಹೇಬರು ಸ್ವದೇಶಿಯ ಹಿತ ಕಾಪಾಡುವ ಮನೋಭಾವ ಉಳ್ಳವರಾಗಿಯೇ, ಜಯರಾಯರ ಕಾರ್ಯವನ್ನು ಮೆಚ್ಚಿ ಹೊಗಳುತ್ತಿರುವ ಗ್ರಾಮಸ್ಥರ ಸಂತಸದಿಂದಾಗಿಯೇ, ಜಯರಾಯ ದಕ್ಷತೆಯ ಕಾರ್ಯದಿಂದಾಗಿ ಪಂಜುಗಳ್ಳರ ದಮನಕ್ಕೆ ಜಯರಾಯರನ್ನು ಕಾನೂನಿನಿಂದ ತಪ್ಪಿಸಿ ಶಿರಸ್ತೆದಾರರಿಗೆ ಪ್ರಕರಣದ ಮಹಜರ್‌ನ್ನು ಬದಲಾಯಿಸುವಂತೆ ತಿಳಿಸಿಹೋಗುತ್ತಾರೆ. ಸ್ವಾತಂತ್ರ ಪೂರ್ವದಲ್ಲಿ ಈ ತರಹದ ದ್ವಂದ್ವ ಆಡಳಿತಗಳಿಂದ ದರೋಡೆಗಳು, ಕಳ್ಳತನಗಳು, ಸುಲಿಗೆಗಳು ನಡೆಯುತ್ತಿದ್ದು, ಅಧಿಕಾರಿವರ್ಗಗಳಲ್ಲಿ ಕಠಿಣ ನಿರ್ಧಾರವನ್ನು ತೆಗೆದುಕೊಳ್ಳುವಲ್ಲಿ ಕಾನೂನಿನ ತೊಡಕುಗಳು ಉಂಟಾಗುತ್ತಿದ್ದವು. ಇಂತಹ ಕಾರಣಗಳಿಂದಾಗಿಯೇ ರಾಮರಾವ್‌ರವರು ಬ್ರಿಟೀಷರ ಆಡಳಿತದ ವಿರುದ್ಧವಾಗಿದ್ದರು. ಸ್ವಾತಂತ್ರ್ಯ ಚಳವಳಿಯ ಪ್ರಭಾವ ಮತ್ತು ರಾಜಾಜಿಯವರಂತಹ ಸ್ನೇಹವೂ ಒಂದು ಕಾರಣವಾಗಿರುತ್ತದೆ.

### ೫. ಕಳ್ಳತನ, ಕೆಲವು ಕಳ್ಳರು

ನವರತ್ನ ರಾಮರಾವ್‌ರು ವೃತ್ತಿ ಜೀವನದ ಅನುಭಗಳನ್ನು 'ಕೆಲವು ನೆನಪುಗಳು' ಎಂಬ ಕೃತಿಯಲ್ಲಿ ದಾಖಲಿಸಿದ್ದಾರೆ. ಈ ಕೃತಿಯೊಂದರಿಂದಲೇ ತಮ್ಮ ವ್ಯಕ್ತಿತ್ವವನ್ನು ಗುರುತಿಸಿಕೊಂಡಿದ್ದಾರೆ. ರಾಮರಾವ್‌ಗಿದ್ದ

ಅಪಾರ ಜ್ಞಾನ, ನೆನಪುಗಳಿಂದ ಸಾಹಿತ್ಯದಲ್ಲಿ ವಿಶೇಷತೆಯನ್ನು ಕೃತಿಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. 'ಕಳ್ಳತನ, ಕೆಲವು ಕಳ್ಳರು' ಕತೆಯು ಇವರ ನೆನಪುಗಳು ಕೃತಿಯಿಂದ ಹೊರತಾಗಿಲ್ಲ, ಕೃತಿಯ ಕೆಲವು ಪ್ರಸಂಗಗಳಿಂದಲೂ ಆಯ್ದುಕೊಂಡಂತೆ ಕಾಣುತ್ತದೆ. ಲೇಖಕರ ಬರಹಗಳಲ್ಲಿ ವಾಸ್ತವ ಮತ್ತು ಕಲ್ಪನೆಗಳ ನಡುವಿನ ಚರ್ಚೆಯಾದಂತೆ ಕಂಡುಬರುತ್ತದೆ. ಇಂತಹ ಚರ್ಚೆಯನ್ನು ಜಾಣತನದಿಂದಲೇ ಅಳಿಸಿಹಾಕಿದ ಕತೆಯಾಗಿಸಿದ್ದಾರೆ.

ರಾಮರಾವ್ ಅನುಭವಗಳೇ ಸಾಹಿತ್ಯದ ಕೃಷಿಗೆ ಪ್ರೇರಣೆಯಾಗಿದೆ. ಈ ಕೃತಿಯು ಅವರ ಆಡಳಿತ ಕಾಲದ ಘಟನೆಗಳ ವಿಶಿಷ್ಟತೆ ತೋರಿಸುತ್ತದೆ. ಕಳ್ಳತನಗಳಲ್ಲಿಯೂ ವಿವಿಧ ಬಗೆಯ ಕಳ್ಳರು ಮತ್ತು ಅವರ ಮನೋಧರ್ಮಗಳನ್ನು ಹಿಡಿದಿಟ್ಟಿದ್ದಾರೆ. ಪಾಶ್ಚಾತ್ಯ ವಿದ್ವಾಂಸನಾದ ಡಿಕ್ವಿನ್‌ಸಿಯ "ಕೊಲೆಯೆಂಬ ಕುಶಲಕಲೆ" ಎಂಬ ಪ್ರಬಂಧದಲ್ಲಿ ಕಳ್ಳತನಗಳ ಭೇದಗಳನ್ನು ಗುರುತಿಸುವಂತೆ ರಾಮರಾವ್‌ರು ಅಧಿಕಾರಾವಧಿಯಲ್ಲಿ ಕಂಡು ಬಂದ ಕಳ್ಳತನಗಳ ವಿಶಿಷ್ಟತೆಗಳನ್ನು ಕತೆಯ ಮೂಲಕ ತಿಳಿಸಿದ್ದಾರೆ.

ಪ್ರಾಚೀನ ಕಾಲದಿಂದಲೂ ಅರವತ್ತು ನಾಲ್ಕು ವಿದ್ಯೆಗಳಿರುವುದು ಕಾಣುತ್ತೇವೆ. ಇಂತಹ ವಿದ್ಯೆಗಳಲ್ಲಿ ಕಳ್ಳತನವೂ ಒಂದಾಗಿದೆ. ವಿಭಿನ್ನ ರಂಗಗಳಲ್ಲಿನ ಕಸಬುಹುಗಳಲ್ಲಿಯಂತೆ ಕಳ್ಳತನದಲ್ಲಿಯೂ ನೈಪುಣ್ಯತೆ, ತಾರತಮ್ಯಗಳು ಕಾಣುತ್ತೇವೆ. ಅಂಗಡಿಯಲ್ಲಿ ಹುಡುಗನೊಬ್ಬ ರೊಟ್ಟಿಯನ್ನು ಕದಿಯುವುದಕ್ಕೂ, ಬ್ಯಾಂಕ್‌ನಲ್ಲಿ ವ್ಯವಸ್ಥಾಪಕರ ವಂಚನೆಗಳಿಗೂ ಇರುವಂತಹ ವ್ಯಾತ್ಯಾಸಗಳನ್ನು ತಿಳಿಸಿದ್ದಾರೆ. ನವೋದಯ, ನವ್ಯ ಕಾಲಘಟ್ಟದಲ್ಲಿ ಕತೆಗಳನ್ನು ರಚಿಸಿದರಾದರೂ ಭಿನ್ನವಾಗಿ ಬರೆದಿದ್ದಾರೆ. ಕಳ್ಳರಲ್ಲಿಯೂ ಪ್ರಾಮಾಣಿಕ ವ್ಯಕ್ತಿತ್ವದವರು ಇರುತ್ತರೆಂದು ಬಿಂಬಿಸಲು ಹೊರಟಂತೆ ಕತೆಯಲ್ಲಿ ತಿಳಿದುಬರುತ್ತದೆ. ರಾಮರಾವ್‌ರು 'ಕೆಲವು ನೆನಪುಗಳು' ಕೃತಿಯಲ್ಲಿ ಕಳ್ಳತನ ಮಾಡುತ್ತಿದ್ದ ಪ್ರಸಂಗಗಳು ದಾಖಲಿಸಿದ್ದು ಮುಖ್ಯ ಪಾತ್ರವಾಗಿ ನಿಲ್ಲುತ್ತಾರೆ. ಉದಾಹರಣೆ ತಂಪ್ರೆಲಿಂಗನಂತ ಕಳ್ಳನನ್ನು ವಿಶಿಷ್ಟವಾಗಿ ಚಿತ್ರಿಸಿರುವುದು ಸಾಕ್ಷಿಯಾಗಿದೆ.

ಗಂಗೇನಹಳ್ಳಿ ಮಾರನಾಯಕನೆಂಬ ಕಳ್ಳನನ್ನು ವರ್ಣಿಸಿರುವುದು ವಿಶೇಷವೆನಿಸುತ್ತದೆ. ಈ ಕಳ್ಳನನ್ನು ಇಂಗ್ಲೆಂಡಿನ 'ರಾಬಿನ್‌ಹುಡ್' ಎಂಬ ಇತಿಹಾಸ ಪುರುಷನಿಗೆ ಹೋಲಿಸಿದ್ದಾರೆ. ಮಾರನಾಯಕನು ಪ್ರಮಾಣಿಕ ಮತ್ತು ಬಡತನದ ವಿರುದ್ಧವೇ ತಿರುಗಿಬೀಳುವವನು. ಅವನ ವರ್ತನೆಯಲ್ಲಿ ಧರ್ಮವಿತ್ತು. ಅವನದು ಸಿಂಹಗತಿ, ಹಿಂಸೆ ಮಾಡಬಾರದು, ಉಪಕಾರವನ್ನು ಮರೆಯಬಾರದು, ಅಪಕಾರವನ್ನು ಕ್ಷಮಿಸಬಾರದು. ಹಣವಂತರನ್ನೇ ಸೂರೆಮಾಡಬೇಕು. ಬಡವರಿಗೆ ಕನಿಕರವಿಟ್ಟು ಸಹಾಯವನ್ನು ಮಾಡಬೇಕು. ಎಂಬುದಾಗಿ ಲೇಖಕರು ಮಾತಿನಲ್ಲಿ ಕಳ್ಳನಲ್ಲಿನ ಪ್ರಮಾಣಿಕತೆಯನ್ನು ತಿಳಿಸುತ್ತಾರೆ.

ಮಾರನಾಯಕನು ಪೋಲೀಸರಿಗೆ ಸಿಗದೇ ತಪ್ಪಿಸಿಕೊಳ್ಳುವಾಗ ಬ್ರಾಹ್ಮಣ ಮನೆತನದ ತುಳಸಾಬಾಯಿ ಎಂಬ ಬಡಮುದುಕಿಯು ಮಾರನಾಯಕನ ಸುಳಿವು ತಿಳಿಸುವುದಿಲ್ಲ. ಈ ಸಹಾಯದ ಕೃತಜ್ಞತೆಗಾಗಿ ಬ್ರಾಹ್ಮಣ ಕುಟುಂಬಕ್ಕೆ ಬಂಗಾರದ ಆಭರಣಗಳನ್ನು ರಹಸ್ಯವಾಗಿಯೇ ನೀಡಿರುತ್ತಾನೆ. ಈ ಕುಟುಂಬವು

ಅನ್ಯಾಯದ ಸಂಪತ್ತನ್ನು ಸರ್ಕಾರಕ್ಕೆ ಹಿಂತಿರುಗಿಸುತ್ತಾರೆ. ಮರುದಿನವೇ ಕಳ್ಳನು ಆ ಮುದುಕಿಯ ಮನೆಯಲ್ಲಿ ಇಷ್ಟೇ ನಿಮ್ಮ ಹಣೆಬರಹ ಎಂದು ಬರೆದು ಇಟ್ಟಿದ್ದನು. ಕಳ್ಳನಿಗೆ ಆಪತ್ತಿನಲ್ಲಿ ಸಹಾಯ ಮಾಡಿದವರಿಗೆ ಕೃತಜ್ಞತೆ ಹೇಳುವುದು, ಬಡವರಿಗೆ ಸಹಾಯಮಾಡುವ ಮನೋಭಾವ ಹೊಂದಿರುವುದನ್ನು ತೋರುತ್ತದೆ.

ಕಳ್ಳತನಗಳಲ್ಲಿ ಎರಡು ವಿಶಿಷ್ಟ ಗುಂಪುಗಳಾಗಿ ಗಂಟಿಚೌಡಿ, ಮತ್ತು ಪಾಮಲೋರು ಕೊರಚರೆಂಬುದಾಗಿದ್ದಾರೆ. ಗಂಟಿಚೌಡಿಯವರು ಪರರ ಸ್ವತ್ತನ್ನು ದೈಹಿಕ ಶ್ರಮವಿಲ್ಲದೆ, ಹಿಂಸೆಯಿಲ್ಲದೆ ಉಪಾಯದಿಂದ ಸಂಪಾದಿಸುವ ಸೂಕ್ಷ್ಮ ಕಲೆಯವರದಾಗಿತ್ತು. ಪಾಮಲೋರರು ಭಯಂಕರ ವರ್ತನೆಯ ಅಹಿಂಸಪರರಾಗಿದ್ದವರು. Third Degree Methodsಗೂ ಒಗ್ಗುವವರಲ್ಲ ಎಂದು ತಿಳಿಸುತ್ತಾರೆ. ಕಳ್ಳತನದ ಗುಂಪುಗಳನ್ನು ಕತೆಯಲ್ಲಿ ಮುಖ್ಯವಾಗಿಸಿದ್ದಾರೆ. ಗಂಟಿಚೌಡಿಯವರ ಕಳ್ಳತನ, ಜಾಮೀನು, ಇನ್ಸ್‌ಪೆಕ್ಟರ್, ಜಮೀನುದಾರರು, ಅಮಲ್ದಾರರು ಹಾದುಹೋಗುವುದು ಮುಂತಾದ ವಿವರಣೆಯನ್ನು ಗಮನಾರ್ಹವಾಗಿದೆ.

ಶಿಕಾರಿಪುರದ ಸಂತೆಯಲ್ಲಿ ಸಣ್ಣಪುಟ್ಟ ಕಳ್ಳತನ ಮಾಡಿ ಸಿಕ್ಕ ಹನ್ನೆರಡು ವರ್ಷ ಹುಡುಗ ಅವನ ತಾಯಿಯ ಗೋಳಾಟವು ಕರುಣೆಯನ್ನು ಗಿಟ್ಟಿಸುವಂತಿವೆ. ತಾಯಿಯ ಪುಣ್ಯವಿದ್ದರೆ ಒಳ್ಳೆ ಪ್ರವೀಣ ಕಳ್ಳನಾಗಿ ಕುಲಕ್ಕೆ ಕೀರ್ತಿಯನ್ನು ತರಬಹುದೆಂಬ ಆಶೆ ಕಳ್ಳರಲ್ಲಿದ್ದ ನೈಪುಣ್ಯತೆಯನ್ನು ತೋರಿಸುತ್ತದೆ. ಈರಿಗ್ಯಾನೆಂಬ ಕಳ್ಳನು ಪ್ರಮುಖವಾಗಿ ಕಂಡುಬರುತ್ತಾನೆ. ಇವನ ನೈಪುಣ್ಯತೆ ಮತ್ತು ಪ್ರಾಮಾಣಿಕತೆಯನ್ನು ಕಂಡು ಲೇಖಕರು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ. ಈರಿಗ್ಯಾನು ಮಲಗಿದ ಹೆಣ್ಣಿನ ಮೂಗುತಿ, ಕಿವಿವಾಲೆ, ಡಾಬು ತೆಗೆಯೋದು ಕಸಬುದಾರನ ಕೆಲಸ ಈ ಕಳ್ಳತನವು "ಮೊದಲು ಒಂದು ಕೂದಲು ಎಳೇನ ಮೂಗಿಗೆ ತಗುಲಿಸೋದರಿಂದ ಎರಡು ಸಲ ಕೈ ವದರುತ್ತಾಳೆ. ಆ ಮೇಲೆ ಅದೇ ಅಭ್ಯಾಸವಾಗಿ ಸುಮ್ಮನಾಗುತ್ತಾಳೆ. ಆ ಮೇಲೆ ಮೆತ್ತಗೆ ನೊಣ ಕುಂತ ಹಂಗೆ ಬೆರಳು ಮೂಗಿನ ಮೇಲಿಡೊದು ಒಂದೊಂದು ಆಭರಣವನ್ನು ನಾಜೂಕಾಗಿ ತೆಗೆಯುವುದು" ಎಂದು ಈರಿಗ್ಯಾನು ತನ್ನ ಚಾಕುಚಾಕ್ಯತೆಯನ್ನು ತಿಳಿಸುತ್ತಾನೆ.

ರಾಮರಾವ್‌ರು ಅನುಭವಕ್ಕೆ ಬಂದ ಹಲವಾರು ರೀತಿಯ ಕಳ್ಳತನಗಳಲ್ಲಿ ಕೆಲವು ಸಂಪ್ರದಾಯಸ್ಥ ಕಳ್ಳರನ್ನು ಕತೆಯಲ್ಲಿ ರಚಿಸಿದ್ದು, ವಿವಿಧ ಪ್ರಕರಣಗಳನ್ನು ಒಂದುಗೂಡಿಸಿ ಕುತೂಹಲಕಾರಿಯಾಗಿಸಿದ್ದಾರೆ. ಅವರು ಪಾಮಲೋರರ ಕತೆಯನ್ನು ವಿಶಿಷ್ಟವಾಗಿ ಕಟ್ಟಿಕೊಟ್ಟಿದ್ದಾರೆ. ಈ ಕಳ್ಳರ ಗುಂಪು ರಾತ್ರಿಸಮಯದಲ್ಲಿ ಮನೆಗಳಿಗೆ ನುಗ್ಗಿ ಸರ್ವನಾಶದ ರುದ್ರವರ್ತನೆಯೇ ಮಾಡುತ್ತಿದ್ದರು. ಮೊದಲು ಬಂದ ಕಳ್ಳರ ಗುಂಪುಗಳಲ್ಲಿ ಪ್ರಾಮಾಣಿಕತೆ, ಕೌಶಲತೆಯನ್ನು ಹೊಂದಿದ ಅಹಿಂಸಾವಾದಿಗಳಾಗಿದ್ದರು. ಎರಡು ಗುಂಪುಗಳ ಘಟನೆಗಳೇ ಕತೆಯಲ್ಲಿ ಪ್ರಧಾನ ಸ್ಥಾನವಾಗಿ ನಿಲ್ಲುತ್ತವೆ. ಲೇಖಕರು ಈ ಪ್ರಕರಣಗಳಲ್ಲಿ ಪ್ರಮುಖವಾಗಿ ಕಾಣದೆ ಹೋದರು ಪ್ರತಿ ಘಟನೆಗಳಲ್ಲಿ ಸ್ಥಾನವನ್ನು ಕಲ್ಪಿಸಿಕೊಂಡಿದ್ದಾರೆ.

ಲೇಖಕರು ಭದ್ರಾವತಿಯಲ್ಲಿ ಅಮಲ್ದಾರರಾಗಿದ್ದ ಕಾಲದಲ್ಲಿ ಗ್ರಾಮಗಳಲ್ಲಿ ದರೋಡೆ ಮಾಡಿದ ಪಾಮಲೋರರ ಕಳ್ಳತನದ ಭೀಕರತೆಯನ್ನು ಬರೆದಿದ್ದಾರೆ. ಬಸಪ್ಪ ಮತ್ತು ಗಿರಿಜವ್ವ ಎಂಬ ದಂಪತಿಗಳು ನಾಲ್ಕು ವರ್ಷದ ಮಗ ಸಣ್ಣಪ್ಪನೊಂದಿಗಿನ ಸುಖ ಸಂಸಾರವಾಗಿತ್ತು. ಲೇಖಕರು ಇವರ ಮನೆಯ ಚಿತ್ರಣವನ್ನು ಸೊಗಸಾಗಿ ಹೇಳಿದ್ದಾರೆ. ಕುಟುಂಬವು ಪಾಮಲೋರರ ದಾಳಿಗೆ ತುತ್ತಾದಾಗ ಮನೆಯಲ್ಲಿ ನಡೆದ ಹೋರಾಟದ ಭೀಕರತೆಗಳು ಊಹೆಗೆ ನಿಲುಕುದಂತೆ ಭಾಸವಾಗುತ್ತದೆ. ಬಸಪ್ಪನು ಮಗುವನ್ನು ಕಾಪಾಡಲು ತನ್ನ ಕಳ್ಳರನ್ನು ತಬ್ಬಿ ಹಿಡಿದಿದ್ದವರು ಬಿಡಿಸಿಕೊಳ್ಳುವ ಯಾತ್ನಮಾಡಿ ಅವನಿಗೆ ಪದೇ ಪದೇ ಚಾಕುವಿನಿಂದ ಇರಿಯುತ್ತಾರೆ. ಬಸಪ್ಪನು ಚೀತ್ಕಾರ ಮಾಡುತ್ತಿದ್ದರೂ ಮಗನ ಪ್ರಾಣಕ್ಕಾಗಿ ಜೀವವನ್ನೆ ಪಣವಾಗಿಡುತ್ತಾನೆ. ಇವನ ಶೌರ್ಯದಿಂದಾಗಿ ಮಗನು ಗಾಯವಿಲ್ಲದೆ ಬದುಕುತ್ತಾನೆ. ಲೇಖಕರು ಈ ಸನ್ನಿವೇಶವನ್ನು ಅನುಪಮವಾಗಿ ರಚಿಸಿದ್ದಾರೆ.

ಕುಟುಂಬವನ್ನು ರಕ್ಷಿಸುವ ಕರ್ತವ್ಯ, ಹೆಂಡತಿಯು ಗಂಡನ ಉಳಿವಿಗಾಗಿ ಓಡಿದ್ದು, ಮಗುವಿನ ಮುಂದೆಯೇ ತಂದೆಯ ಧಾರುಣ ಅಂತ್ಯ. ಈ ಘಟನೆಯುನ್ನೇ ಉಸಿರುಗಟ್ಟಿಸುವಂತೆ ರಚಿಸಿದ್ದಾರೆ. ಗಿರಿಜವ್ವನ ಮನೆಯಲ್ಲಿ ಆದ ಕಳ್ಳತನದ ಆಭರಣಗಳು ಪೊಲೀಸರಿಂದ ಸಿಗುತ್ತವೆ. ಪಾಮಲೋರರನ್ನು ಹಿಡಿಯಲು ದೊಡ್ಡ ಸಾಹಸವೇ ನಡೆಯುತ್ತದೆ. ಗ್ರಾಮವೊಂದರಲ್ಲಿ ಆಯುಧಗಾರ ಸಮೇತ ಸಿಕ್ಕಿಹಾಕಿಕೊಳ್ಳುತ್ತಾರೆ. ರಾಮರಾಯರು ಈ ಕೃತ್ಯದ ವಿಚಾರಣೆ ನಡೆದು ಪಾತಕಿಗಳಿಗೆ ಕಾನೂನಿನ ಪ್ರಕಾರ ದಂಡನೆಯೂ ಆಯಿತೆಂದು ನನ್ನ ನೆನಪು ಎಂದು ಕತೆಯನ್ನು ಮುಗಿಸಿದ್ದಾರೆ.

ರಾಮರಾವ್‌ರು ನಾಲ್ಕು ಕಳ್ಳತನದ ಪ್ರಕರಣಗಳನ್ನು ಒಂದುಗೂಡಿಸಿ 'ಕಳ್ಳತನ ಕೆಲವುಕಳ್ಳರು' ಎಂಬ ಕತೆಯಾಗಿಸುವಲ್ಲಿ ಜಾಣ್ಮೆ ಮೆರೆದಿದ್ದಾರೆ. ಮೈಸೂರಿನ ರಾಜಮನೆತನದ ಕಾಲದಲ್ಲಿ ಗ್ರಾಮಗಳಲ್ಲಿ ನಡೆಯುವ ಅರಾಜಕತೆಯನ್ನು ಕತೆಗಳ ಮೂಲಕ ತೋರಿಸಿದ್ದಾರೆ. ಅವರ ಆತ್ಮಕಥೆಯಲ್ಲಿ ಅನೇಕ ಕಳ್ಳತನ ಪ್ರಸಂಗಗಳು ದಾಖಲಿಸಿದ್ದಾರೆ. ಅವರ ಪಾತ್ರಕ್ಕಿಂತಲೂ ಇತರರ ಪಾತ್ರಗಳು ಪ್ರಮುಖವಾಗಿಸಿದ್ದಾರೆ. ಅಂತಹ ಉದಾರ ಮನೋಭಾವದಿಂದಲೇ ಕಳ್ಳರನ್ನು ಅವರ ಪ್ರಮಾಣಿಕತೆ, ನೈಪುಣ್ಯತೆ, ಕ್ರೂರತನವನ್ನು ದಾಖಲಿಸಿ ಚಿರಕಾಲವಾಗಿಸಿದ್ದಾರೆ. ಕಳ್ಳರು ರಾಮರಾವ್‌ರನ್ನು ಬಹುಕಾಲ ಕಾಡಿದ್ದು ಅವರಲ್ಲಿನ ವೈಶಿಷ್ಟ್ಯತೆಗಳನ್ನೇ ಎತ್ತಿಹಿಡಿದಿದ್ದಾರೆ. ಈ ತರಹದ ಭಿನ್ನವಾದ ಕಥಾ ಶೈಲಿ ಸಾಹಿತ್ಯದಲ್ಲಿ ಹೊಸದಾಗಿದೆ.

ಮುಖ್ಯವಾಗಿ ಕತೆಯಲ್ಲಿ ನಮ್ಮನ್ನು ಆಕರ್ಷಿಸಿವುದು ನೈಜ್ಯ ಘಟನೆಗಳನ್ನು ಕತೆಯಾಗಿಸಿ ಜೀವ ತುಂಬಿರುವುದು. ಅಮಲ್ದಾರರೊಬ್ಬನ ಅನುಭವಕ್ಕೆ ಬಂದ ಘಟನೆಗಳಾದರೂ ವಾಸ್ತವದ್ದೊ, ಕಲ್ಪನೆಯೋ ಎಂಬ ಚರ್ಚೆಯನ್ನು ಮಾಡುವಂತಿವೆ. ರಾಮರಾವ್‌ರು ಕತೆಗಳನ್ನು ಜೋಡಿಸಿರುವ ಅಸಾಧಾರಣ ಕೌಶಲ ಮತ್ತು ಅದರ ಹಿಂದಿನ ಸಹಜತೆಯನ್ನು ಬಿಂಬಿಸುತ್ತದೆ. ಕತೆಯನ್ನು ಬರೆಯುವಲ್ಲಿ ಅಸಹಜತೆಯನ್ನು ತೋರದೆ ಸರಳ ನಿರೂಪಣೆಯಲ್ಲಿ ಕಲಾತ್ಮಕತೆಯನ್ನು ಎತ್ತಿಹಿಡಿಯುತ್ತದೆ. ಲೇಖಕರೇ ಕತೆಯಲ್ಲಿ ನಿರೂಪಕರಾಗಿದ್ದಾರೆ. ಕಳ್ಳರ ಮೇಲಿನ ಮನೋಭಾವವು ಅವರಲ್ಲಿನ ವೈಶಿಷ್ಟ್ಯತೆ ಗುರುತಿಸುವಲ್ಲಿ ರಾಮರಾವ್‌ರ ವ್ಯಕ್ತಿತ್ವದ ನಿದರ್ಶನವಾಗಿದೆ.

## ಆಕಾಶವಾಣಿಯಲ್ಲಿ ಪ್ರಸಾರಗೊಂಡ ಮೂರು ಲೇಖನಗಳು

೧. ಮಗಳಿಗಾಗಿ ಬರೆದ ಕಥೆ - ಕಾವ್ಯ ಸೃಷ್ಟಿಗೆ ಸ್ಫೂರ್ತಿ ಮೂಲ

೨. ಸುಧಾರಣೆ - ಸಂಪ್ರದಾಯ

೩. ಅಧಿಕಾರಿ - ಅಂದು ಸ್ಥಳ ಧಣಿ - ಇಂದು ಪುಢಾರಿಗಳ ಋಣಿ

### ೧. ಮಗಳಿಗಾಗಿ ಬರೆದ ಕಥೆ - ಕಾವ್ಯ ಸೃಷ್ಟಿಗೆ ಸ್ಫೂರ್ತಿ ಮೂಲ

ನವರತ್ನ ರಾಮರಾಯರು ಮೈಸೂರು ಸರ್ಕಾರದಲ್ಲಿ ಉನ್ನತವಾದ ಹುದ್ದೆಗಳನ್ನು ನಿರ್ವಹಿಸಿ ಮನೆಮಾತಾದವರು. ರಾಯರು ತಮ್ಮ ವೃತ್ತಿ ಬದುಕಿನ ವಿವಿಧ ಘಟನೆಗಳನ್ನು ಆತ್ಮಕಥೆಯಾಗಿ, ಲೇಖನಗಳಾಗಿ ಬರೆದು ಯಶಸ್ವಿಯಾದವರು. ಅವರಿಗಿದ್ದ ಸಾಹಿತ್ಯಾಸಕ್ತಿಯು ಕನ್ನಡದಲ್ಲಿ ಗುರುತರವಾದ ಕೊಡುಗೆ ನೀಡಲು ಸಾಧ್ಯವಾಯಿತು. ರಾಯರು ಮೂಲತಃ ಮರಾಠಿ ಮನೆತನದವರು. ಒಂದೆರೆಡು ಶತಮಾನದ ಹಿಂದೆಯಷ್ಟೆ ಅವರ ಮನೆಯಲ್ಲಿ ಕನ್ನಡದ ವ್ಯವಹಾರವಿತ್ತು. ಆದರೂ ರಾಯರಿಗೆ ಕನ್ನಡವೇ ಹೆಚ್ಚು ವ್ಯವಹಾರಿಕ ಭಾಷೆಯಾಗಿದ್ದು, ಅವರ 'ಕೆಲವು ನೆನಪುಗಳು' ಆತ್ಮಕಥೆಯಲ್ಲಿ ಕಾಣುತ್ತದೆ.

ರಾಯರು ತಾರುಣ್ಯದಲ್ಲಿರುವಾಗ ಭಾರತದಾದ್ಯಂತ ಸ್ವಾತಂತ್ರ್ಯ ಚಳುವಳಿಯ ಪ್ರಭಾವ ಹೆಚ್ಚಾಗಿತ್ತು. ಸ್ವದೇಶಿ ಚಳುವಳಿಯ ಹಲವಾರು ಬ್ರಿಟೀಷರ ನೀತಿಗಳನ್ನು ಧಿಕ್ಕರಿಸುವುದು ಆಗ ಸಹಜವಾಗಿತ್ತು. ಭಾರತದ ಅಗ್ರಗಣ್ಯರು ಬ್ರಿಟೀಷರ ರಾಜಕೀಯ ನೀತಿ, ಶಿಕ್ಷಣ ನೀತಿ ಮೆಚ್ಚಿದ್ದು ವಿಚಿತ್ರವೆನಿಸುತ್ತದೆ. ರಾಮರಾಯರಂತಹ ವ್ಯಕ್ತಿತ್ವವು ಅದಕ್ಕೆ ಹೊರತಾದಂತಿಲ್ಲ. ಇಂಗ್ಲೀಷ್ ಭಾಷೆಯ ಮೇಲಿನ ವ್ಯಾಮೋಹ ಅವರನ್ನು ಪ್ರಭಾವಿಸಿತ್ತು. ತಾರುಣ್ಯದಲ್ಲಿ ಇಂಗ್ಲೀಷ್‌ನ ಕಲಿಕೆಗೆ ಹೆಚ್ಚು ಒತ್ತುಕೊಟ್ಟವರು ಹಾಗೂ ಬ್ರಿಟೀಷರು ಪಾಶ್ಚಾತ್ಯರು ಇವರ ಕಲಿಕೆ ಮತ್ತು ಬರವಣಿಗೆ ಕುರಿತು ಮೆಚ್ಚಿಗೆ ವ್ಯಕ್ತಪಡಿಸಬೇಕು ಎನ್ನುವಂತಹ ಹಂಬಲ ಇವರದಾಗಿತ್ತು. ಇಂಗ್ಲೀಷ್‌ನಲ್ಲಿ ಗಾಢ ಪಾಂಡಿತ್ಯ ಪಡೆದು ಕಾದಂಬರಿಗಳು, ಲೇಖನಗಳನ್ನು ಬರೆದಿದ್ದಾರೆ. ಕನ್ನಡದ ಕಥೆಗಳನ್ನು ಇಂಗ್ಲೀಷ್‌ಗೆ ಭಾಷಾಂತರಿಸಿದ್ದು ಇವರ ಭಾಷಾ ಹಿತಕ್ಕೆ ಸಾಕ್ಷಿಯಾಗಿತ್ತು. ರಾಯರು ಇಂಗ್ಲೀಷ್‌ನಲ್ಲಿ ವಿದ್ವತ್ತು ಪಡೆದವರು ಎಂಬ ಕಾರಣಕ್ಕೆ ಹಲವು ಹುದ್ದೆಗಳು ಅರಿಸಿ ಬಂದಿದ್ದು ಅಚ್ಚರಿಯಲ್ಲ. ಅಷ್ಟೇ ಅಸಾಧಾರಣ ವ್ಯಕ್ತಿತ್ವವು ಅವರದಾಗಿತ್ತು.

ರಾಮರಾಯರಿಗೆ ಇಂಗ್ಲೀಷ್‌ನ ವ್ಯಾಮೋಹದಿಂದಾಗಿಯೇ ಕನ್ನಡದ ಮೇಲೆ ಮಮತೆ ಇರಲಿಲ್ಲ. ಹೈಸ್ಕೂಲ್, ಕಾಲೇಜು ಕ್ಲಾಸ್‌ಗಳಲ್ಲಿ ಕನ್ನಡದ ಕ್ಲಾಸ್‌ಗಳಿಗೆ ಚಕ್ಕರು ಹಾಕುವುದು ಮಾಮೂಲಿಯಾಗಿತ್ತು. ಕಾಲೇಜ್ ದಿನಗಳಲ್ಲೇ ಇಂಗ್ಲೀಷ್ ಸಾಹಿತ್ಯದಲ್ಲಿ ಹಿಡಿತವಿತ್ತು ಹಾಗೂ ಸ್ನೇಹಿತರಲ್ಲಿ, ಉಪಾಧ್ಯಾಯರಲ್ಲಿಯು ಸಹಾ ಪ್ರಭಾವಿಯಾಗಿದ್ದರು. ಕಾಲೇಜು ದಿನಗಳಲ್ಲಿ ರಾಯರು ಬರೆದ ಇಂಗ್ಲೀಷ್ ಕಾದಂಬರಿಯ "Christion college Magazine"ನಲ್ಲಿ ಪ್ರಕಟವಾಯಿತು. ಈ ಕಾದಂಬರಿಯ ಕುರಿತು ಪ್ರಶಂಸೆಗಳು ವ್ಯಕ್ತವಾಯಿತು. ಕಾನೂನು ಪದವಿ ಪಡೆಯುವ ಸಲುವಾಗಿ ಮುಂಬೈಗೆ ಹೋದರು. ವಿದ್ಯಾಭ್ಯಾಸದ

ಖರ್ಚಿಗಾಗಿ ಲೇಖನಗಳನ್ನು ಬರೆದು, ಬಂದ ಸ್ವಲ್ಪ ಹಣದಲ್ಲಿ ವಿದ್ಯಾಭ್ಯಾಸ ಮುಗಿಸಿದ್ದರು. ಇವರ ಇಂಗ್ಲೀಷ್ ಭಾಷೆಯಲ್ಲಿನ ವಿದ್ವತ್ತೇ ಜೀವನ ಸಾಗಿಸಿದ್ದು ಅಲ್ಲದೇ ಬದುಕನ್ನು ಕಟ್ಟಿಕೊಟ್ಟಿದ್ದು ವಿಶೇಷ ವೆನಿಸುತ್ತದೆ.

ನವರತ್ನ ರಾಮರಾಯರಿಗೆ ಮೈಸೂರು ಸರ್ಕಾರದಲ್ಲಿ ನೌಕರಿಸಿಕ್ಕ ಮೇಲೆ ಜನಸಾಮಾನ್ಯರ ಜೊತೆ ಬೆರೆಯುವುದು ಮತ್ತು ಪತ್ರ ವ್ಯವಹಾರವು ಅನಿವಾರ್ಯವಾಗಿತ್ತು. ಮರಾಠಿ ಮನೆತನದಿಂದ ಬಂದ ರಾಯರು ಉರ್ದು ಮಿಶ್ರಿತ ಕನ್ನಡದ ಬಳಕೆ ಸಹಜವಾಗಿತ್ತು. ಈ ನಡುವೆ ಮಾಸ್ತಿಯವರ ಪರಿಚಯದಿಂದಾಗಿ ಅವರ ಕಥೆಗಳನ್ನು ಓದಲು ಪ್ರಾರಂಭಿಸಿದರು. ಮಾಸ್ತಿಯವರು ರಾಯರಲ್ಲಿದ್ದ ಸಾಹಿತ್ಯಾಸಕ್ತಿಯನ್ನು ಪ್ರೇರೇಪಿಸಿದವರು. ರಾಯರು ಕಥೆಯನ್ನು ಹೇಳುವ ರೀತಿ ದಿವ್ಯವಾದದ್ದು, ಇವರ ಮಗಳು ರಾಯರಿಗೆ ಕಥೆಯನ್ನು ಬರೆಯುವಂತೆ "ಅಣ್ಣ ನೀವು ದಿವ್ಯವಾಗಿ ಹೇಳುತ್ತೀರಲ್ಲ, ನೀವೇ ಏಕೆ ಕಥೆಯನ್ನು ಬರೆಯಬಾರದು?" ಎಂದು ಒತ್ತಾಯ ಮಾಡಿದರು. ಆಗ ಅವರು ನಾನು ಏಕೆ ಬರೆಯಬಾರದು? ಎಂದು ತನ್ನನೇ ಪ್ರಶ್ನಿಸಿಕೊಂಡು ಮಗಳು ಕೇಳಿದ ಪ್ರೇರಣೆಯಿಂದಲೇ "ಲಕ್ಷ್ಮಣರಾಯನ ಭಾಗ್ಯ" ಎನ್ನುವ ಕಥೆಯನ್ನು ಬರೆದರು. ಮಾಸ್ತಿಯವರು ಇದನ್ನು "ಪ್ರಬುದ್ಧ ಕರ್ನಾಟಕ"ದಲ್ಲಿ ಪ್ರಕಟಿಸಿದರು. ಈ ಕಥೆಯೇ ಅವರು ಕನ್ನಡಕ್ಕೆ ಕೊಟ್ಟ ಮೊದಲ ಕಾಣಿಕೆಯಾಗಿತ್ತು.

ರಾಯರ ಅಧಿಕಾರಾವಧಿಯಲ್ಲಿ ಜನಸಾಮಾನ್ಯರ ಬಳಕೆಯು ನಿರಂತರವಾಗಿದ್ದರಿಂದ ಕನ್ನಡ ಭಾಷೆಯಿಂದಾಗಿಯೇ ಜನಗಳ ತಿಳುವಳಿಕೆ ಮತ್ತು ಮನವರಿಕೆಯಾಯಿತು. ಹಲವಾರು ಸಭೆಗಳಲ್ಲಿ ಅವರ ಭಾಷಣಗಳು ಸಮಾಧಾನವನ್ನು ತಂದುಕೊಟ್ಟವು. ರಾಯರು ಈ ಕುರಿತು 'ಭಾವನೆಯ ಬೆಳೆ ಇದ್ದರೆ ಅದಕ್ಕೆ ಕನ್ನಡದಲ್ಲಿ ಭಾಷೆಯ ಬರವಿರುವುದಿಲ್ಲ ಎಂದು ಕ್ರಮೇಣ ಅರಿತೆ' ಎಂದು ಹೇಳಿರುವುದು ರಾಯರಿಗೆ ಇಂಗ್ಲೀಷ್‌ನ ಪ್ರಭಾವ ಕಡಿಮೆಯಾಗಿ ಕನ್ನಡವೇ ಅವರ ಮನವನ್ನು ಗೆದ್ದು ಸಾಹಿತ್ಯದಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿತು. ಇವರ ಬರಹವನ್ನು ಆಪ್ತರು ಮೆಚ್ಚಿ ಹೊಗಳುವುದು ಇಂಗ್ಲೀಷನ್ನು ಜನ ಮೆಚ್ಚಿ ಹೊಗಳುವುದಕ್ಕಿಂತಲೂ ಹೆಚ್ಚು ಆನಂದವನ್ನು ಹೊಂದುತ್ತಿದ್ದರಿಂದ. ಇಂತಹ ಪ್ರೇರಣೆಗಳೇ ಅವರನ್ನು ಕನ್ನಡದತ್ತ ಬರಲು ಸ್ವಾಗತಿಸಿದವು. ರಾಯರು ಕನ್ನಡದಲ್ಲಿಯೇ ಬರೆಯೋಣವೆಂದು ನಿಶ್ಚಯಿಸಿದರು. ಬ್ರಿಟೀಷ್ ಸರ್ಕಾರದ ಉನ್ನತ ಹುದ್ದೆಯಲ್ಲಿರುವ ರಾಯರು ಕ್ರಮೇಣ ಕನ್ನಡಕ್ಕೆ ವಾಲಿಕೊಂಡರು, ಕನ್ನಡ ಸಾಹಿತ್ಯದಲ್ಲಿಯೂ ಹೊಸತನದಲ್ಲೇ ಸೃಜನಶೀಲ ಸಾಹಿತ್ಯರಚನೆ ಮಾಡಿದ್ದು ಇವರ ವಿಶಿಷ್ಟ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿದೆ.

ರಾಮರಾಯರಿಗೆ ಕನ್ನಡದಲ್ಲಿ ಸಾಹಿತ್ಯ ರಚನೆಯ ದೃಢತೆ, ಹೊಸತನದ ತುಡಿತ, ಅದುವರೆಗೂ ಸಾಹಿತ್ಯದಲ್ಲಿದ್ದ ಭಾಷೆಯ ಬಳಕೆ, ವಾಕ್ಯ ರಚನೆ, ಸಂಸ್ಕೃತ ಮಿಶ್ರಿತ ಕನ್ನಡತನವು ರಾಯರಿಗೆ ಹಿಡಿಸಿರಲಿಲ್ಲ. ಇಂತಹ ಹಲವಾರು ಬರವಣಿಗೆಗಳು ಸಾಹಿತ್ಯದಲ್ಲಿ ಹೇರಳವಾಗಿದ್ದರೂ ಜನಸಾಮಾನ್ಯರಿಗೆ ಅರ್ಥೈಸುವಲ್ಲಿ

ವಿಫಲವಾಗಿದ್ದವು. "ಕನ್ನಡಿಗರು ಸಾಮಾನ್ಯವಾಗಿ ಬಳಸುವ ಕನ್ನಡವೇ ಅವರ ಸಾಹಿತ್ಯ ರಚನೆಯ ಧ್ಯೇಯವಾಗಿರಿಸಿಕೊಂಡರು." ಸಾಮಾನ್ಯರು ಆಡುವ ಭಾಷೆ, ಶೈಲಿಯಲ್ಲಿನ ಸೊಗಸು, ಶೃಂಗಾರ, ಸಂಸ್ಕೃತಿಯುಳ್ಳ ಜಾಣ ಹೆಂಗಸರು ಆಡುವ ಮಾತಿನ ಶೈಲಿಯನ್ನು ಸಾಮಾನ್ಯ ಭಾಷೆಯಲ್ಲಿ ಸಾಹಿತ್ಯ ರಚನೆಯಲ್ಲಿ ಬಳಸುವ ವಿಭಿನ್ನ ಆಲೋಚನೆ ಕನ್ನಡತನಕ್ಕೆ ಹೊಸತನ್ನು ನೀಡುವ ನಿರೂಪಣಾ ಶೈಲಿಯು ಇವರ ಸಾಹಿತ್ಯಕ್ಕೆ ವಿಶಿಷ್ಟತೆಯನ್ನು ಕಲ್ಪಿಸಿಕೊಟ್ಟಿದೆ.

ರಾಯರು ಉನ್ನತ ಅಧಿಕಾರಿಯಾಗಿ ಅಸಾಮಾನ್ಯರಂತೆ ಕಂಡುಬಂದರೂ, ಸಾಹಿತ್ಯ ಕ್ಷೇತ್ರಕ್ಕೆ ಸಾಮಾನ್ಯರೇ ಆಗಿದ್ದರು. ಅಷ್ಟಾಗಿ ಕನ್ನಡ ಬಾರದ ಇವರು ಪ್ರಾಮಾಣಿಕವಾಗಿ ಹೇಳಿಕೊಳ್ಳುವ ಗುಣಗಳು, ಸಾಹಿತ್ಯದ ರಚನೆಯಲ್ಲಿ ತಳೆದಿರುವಂತಹ ಭಿನ್ನ ನಿಲುವು ಹೊಸತನಕ್ಕೆ ನಾಂದಿಯಾಯಿತು. ರಾಯರ ಸಹಜವಾದ ನಿರೂಪಣೆಯು ಸಾಹಿತ್ಯದಲ್ಲಿ ಹೊಸ ದೊಂದು ಆಯಾಮವನ್ನೇ ನೀಡಿತು. ಮಾಸ್ತಿಯವರ ಪ್ರಭಾವ ಮಗಳ ಸ್ಫೂರ್ತಿಯಿಂದಾಗಿ ಸಾಹಿತ್ಯದಲ್ಲಿ ಗುರುತರವಾದ ಕೊಡುಗೆಯನ್ನು ನೀಡಿದ್ದು ಕಂಡುಬರುತ್ತದೆ.

**೨. ಸುಧಾರಣೆ ಸಂಪ್ರದಾಯ**

ಸಮಾಜದಲ್ಲಿ ನಡೆಯುವ ಹಲವಾರು ಘಟನೆಗಳಿಗೆ ಗಣ್ಯ ವ್ಯಕ್ತಿಗಳು ಪ್ರತಿಕ್ರಿಯೆ ನೀಡುವುದು ಅಂದಿಗೂ ಇಂದಿಗೂ ಸಹಜವಾಗಿದೆ. ಜವಾಬ್ದಾರಿಯುತ ಅಧಿಕಾರಿಗಳು ಸಮಾಜದಲ್ಲಿನ ಗುರುತರವಾದ ಘಟನೆಗಳಿಗೆ ಸಾಕ್ಷಿಯಾಗಬೇಕಿತ್ತು. ರಾಮರಾವ್‌ರು ಅಧಿಕಾರಿಯಾಗಿ ವಾಸ್ತವದ ವಿಚಾರಗಳಲ್ಲಿ, ಮೂಢನಂಬಿಕೆಗಳನ್ನು ತೊಲಗಿಸುವ ನಿಟ್ಟಿನಲ್ಲಿ, 'ಸಂಪ್ರದಾಯ ಸುಧಾರಣೆ' ಎಂಬ ಲೇಖನವನ್ನು ಪ್ರಕಟಿಸಿದ್ದಾರೆ. ಅಷ್ಟೇ ಅಲ್ಲದೇ ಇವರು ಸಮಾಜವನ್ನು ಆಧುನಿಕ ಜೀವನಕ್ಕೆ ತೆಗೆದುಕೊಂಡು ಹೋಗುವ ಮಾರ್ಗಗಳನ್ನು ತಿಳಿಸಿದ್ದಾರೆ. ಈ ಮಾರ್ಗಗಳು ನವ ಸಮಾಜದ ನಿರ್ಮಾಣಕ್ಕೆ ಸಹಕಾರಿಯಾಗುವಂತಿವೆ.

ಲೇಖಕರ ಸುಧಾರಣೆ ಸಂಪ್ರದಾಯಗಳ ನಡುವಿನ ಚರ್ಚೆಯನ್ನು ವಿಜ್ಞಾನ ಮತ್ತು ಸಂಪ್ರದಾಯ ನಡುವಿನ ಸಂಘರ್ಷವಾಗಿಸಿದ್ದಾರೆ. ಮೈಸೂರಿನ ಸುತ್ತಮುತ್ತಲಿನ ಗ್ರಾಮಗಳಲ್ಲಿನ ಒಡನಾಟದಿಂದಾಗಿ ಸಮಾಜದಲ್ಲಿದ್ದ ಸಾಂಪ್ರದಾಯಿಕವಾಗಿ ಬಂದ ಆಚರಣೆಗಳು ಇವರಿಗೆ ಹೆಚ್ಚಿನ ಪರಿಚಯವಿತ್ತು. ಮೇಲಾಗಿ ಬ್ರಾಹ್ಮಣ ಮನೆತನದವರಾಗಿದ್ದರು. ಇವರ ಅಧಿಕಾರಾವಧಿಯಲ್ಲಿ ಹಲವಾರು ಗ್ರಾಮಗಳಿಗೆ ಭೇಟಿಕೊಟ್ಟು ಜನರೊಂದಿಗೆ ಬೆರೆತು ಸಮಸ್ಯೆಗಳಿಗೆ ಸ್ಪಂದಿಸಿದ್ದರು, ಗ್ರಾಮಗಳಲ್ಲಿ ಆಚರಣೆಗಳನ್ನು ಬಹಳಷ್ಟು ಹತ್ತಿರದಿಂದಲೇ ನೋಡಿದವರಾಗಿದ್ದಾರೆ. ರಾಯರದು ಚಿಕ್ಕವಯಸ್ಸಿನಿಂದಲೇ ಆಚರಣೆಗಳನ್ನು ವಿರೋಧಿಸುವ ನೇರ ನುಡಿಯ ಸ್ವಭಾವ, ಸ್ವತಃ ಮನೆಯಲ್ಲಿನ ಆಚರಣೆಗಳನ್ನೇ ವಿರೋಧಿಸುತ್ತಿದ್ದವರು. ಮೈಸೂರು ಸರ್ಕಾರದಲ್ಲಿ ಅಮಲ್ದಾರರಾಗಿ, ಸರ್ಕಾರದ ವಿವಿಧ ಹುದ್ದೆಗಳನ್ನು ನಿರ್ವಹಿಸಿ ಕಮೀಷನರ್‌ರಾದ ರಾಯರು ಮೊದಲಿನಿಂದಲೂ ಪಾಶ್ಚಾತ್ಯ ಶಿಕ್ಷಣ, ಸಾಹಿತ್ಯ ವಿದ್ವಾಂಸರ ಕಾಳಜಿಯಿಂದಲೇ ಆಧುನಿಕತೆಯ ಪ್ರಭಾವಕ್ಕೆ

ಒಳಗಾಗಿದ್ದವರು. ಹಾಗಾಗಿ ಸಹಜವಾಗಿಯೇ ಜೀವನ ವಿಧಾನದಲ್ಲಿ ಬದಲಾವಣೆಯನ್ನು ಬಯಸುವ ನಿಟ್ಟಿನಲ್ಲಿ ಯೋಚಿಸುತ್ತಿದ್ದರು.

ಲೇಖನದ ಹೊತ್ತಿಗೆ ಭಾರತವು ಬ್ರಿಟೀಷರಿಂದ ಬಂಧಮುಕ್ತಗೊಂಡು ಸ್ವಾತಂತ್ರವಾಗಿತ್ತು. ಅದುವರೆಗೆ ರಾಜಮನೆತನಗಳ ಆಳ್ವಿಕೆಯಿಂದ ಸಂಪ್ರದಾಯಗಳ ಪರಿಪಾಲನೆಗೆ ತೊಡಗಿ ಸಂಪ್ರದಾಯಿಕವಾಗಿ ಬಂದ ಆಚರಣೆಗಳಿಂದ ಸಾಂಸ್ಕೃತಿಕವಾದ ಮಹತ್ವವನ್ನೇ ಕಳೆದುಕೊಂಡಿತ್ತು. ದೇಶವನ್ನು ಹೊಸದಾಗಿ ಕಟ್ಟುವಂತಹ ಕಾರ್ಯ ಸ್ವಾತಂತ್ರ್ಯಗೊಂಡನಂತರ ನಡೆಯಬೇಕಾಗಿತ್ತು. ನಮ್ಮ ಜನತೆ ಆಚರಣೆಗಳನ್ನು ಕೈಬಿಟ್ಟು ಆಧುನಿಕ ಬದುಕನ್ನು ಕಟ್ಟಿಕೊಂಡಾಗ ದೇಶದ ಏಳಿಗೆ, ಭದ್ರತೆ ಸಾಧ್ಯವಾಗುತ್ತಿತ್ತು. ವೈಜ್ಞಾನಿಕ ಕ್ಷೇತ್ರಗಳಲ್ಲಿ ಭಾರತೀಯರು ಬದುಕನ್ನು ಕಟ್ಟಿಕೊಳ್ಳುವುದು ಅವಶ್ಯವಾಗಿತ್ತು. ದೇಶದ ಆರ್ಥಿಕತೆಯನ್ನು ಸುಭದ್ರಗೊಳಿಸುವುದು, ಪಾಶ್ಚಾತ್ಯ ದೇಶಗಳಿಗೆ ಸರಿಸಮಾನವಾಗಿ ನಿಲ್ಲುವುದು ಮುಖ್ಯವಾಗಿತ್ತು. ಜನರ ಪರಿಸ್ಥಿತಿಯ ಸುಧಾರಣೆ ಮುಂತಾದ ಅಂಶಗಳ ಕಡೆ ಗಮನ ಹರಿಸುವ ಮೂಲಕ ದೇಶವನ್ನು ಕಟ್ಟುವುದು, ಸಂಪ್ರದಾಯಿಕವಾಗಿ ಬಂದ ಆಚರಣೆಗಳು ಸಡಿಲಗೊಂಡು ಹೊಸ ಜೀವನವನ್ನು ಕಂಡುಕೊಳ್ಳುವ ಬದುಕು ನಮ್ಮದಾಗಬೇಕು ಎನ್ನುವುದು ರಾಯರ ಚಿಂತನೆಯಾಗಿತ್ತು.

ನವರತ್ನ ರಾಯರು ಸುಧಾರಣೆಯ ವಿಚಾರವನ್ನು ಎರಡು ರೀತಿಯಲ್ಲಿ ತಿಳಿಸುತ್ತಾರೆ. ಒಂದನೆಯದು ಕಾಲದಗಣನೆಗೆ ಬಿಡುವುದು. ಇದರಿಂದ ಸಾಂಪ್ರದಾಯಿಕವಾಗಿ ಬಂದ ಆಚರಣೆಗಳು ಕಾಲಾಂತರದಲ್ಲಿ ಕೈ ಬಿಟ್ಟು ಹೋಗಿ ಸುಧಾರಣೆಗೊಳ್ಳುತ್ತವೆ. ಎರಡೆಯದು ಸಂಪ್ರದಾಯದ ಆಚರಣೆಗಳಲ್ಲಿ ಏಕಾಏಕಿ ಬದಲಾವಣೆ ಗೊಳಿಸುವುದು. ಇಲ್ಲಿ ಕುಟುಂಬ, ಸಮಾಜ, ವ್ಯಾಪಾರ, ವ್ಯವಹಾರ, ಅರ್ಥಸಾಧನೆ, ರಾಜಕೀಯ, ಆರೋಗ್ಯ, ವಿದ್ಯಾರ್ಜನೆ, ಅಧ್ಯಾತ್ಮ ಇವುಗಳು ಜೀವನದ ಮುಖ್ಯಭಾಗಗಳು. ಹಳೇ ನಂಬಿಕೆಗಳು, ಸನಾತನ ಸಂಪ್ರದಾಯಗಳು ಪರೀಕ್ಷೆ, ಪರಿವರ್ತನೆ, ಆಚಾರ ವಿಚಾರಗಳು, ಇವೆಲ್ಲವೂ ಆಧುನಿಕತೆಯ ಮುಂದೆ ಕತ್ತಲು ಕೋಟೆಯೊಳಗಿನ ಗೊಗ್ಗಯ್ಯನ ದೀಪದ ಬೆಳಕಿನಲ್ಲಿ ಮಾಯವಾಗುತ್ತಿದೆ ಎಂದು ತಿಳಿಸಿದ್ದಾರೆ. ರಾಯರ ಕಾಲಕ್ಕೆ ಆಚರಣೆಗಳ ವಿಷಯದಲ್ಲಿ ಅಂತಹ ಕತ್ತಲು ಆವರಿಸಿದ್ದು ಸತ್ಯ. ಆಧುನಿಕತೆಯಲ್ಲೂ ಸನಾತನ ಕಾಲದಿಂದಲೂ ಬಂದ ಉತ್ತಮ ಆಚರಣೆಗಳು ಸಹ ವಿಜ್ಞಾನದ ಬೆಳಕಿನಲ್ಲಿ ಮರೆಯಾಗಿವೆ ಎನ್ನುತ್ತಾರೆ. ಹಲವು ಸಂಪ್ರದಾಯಗಳಲ್ಲಿ ಸುಧಾರಣೆಯಾಗುವುದರ ಜೊತೆಗೆ ಕೆಲವನ್ನು ಮುಂದುವರೆಸಿಕೊಂಡು ಹೋಗಬೇಕು ಎನ್ನುವ ವಾದವನ್ನು ಮುಂದಿಡುತ್ತಾರೆ. ರಾಯರು ಕೆಟ್ಟ ಆಚರಣೆ ಮತ್ತು ಒಳ್ಳೆಯ ಆಚರಣೆಗಳ ಕಡೆ ಗಮನ ಹರಿಸಿ ಚರ್ಚಿಸಿದಂತಿದೆ. ಕೆಳಜಾತಿ ಮತ್ತು ಮೇಲ್ ಜಾತಿಗಳ ನಡುವಿನ ಆಚರಣೆಗಳನ್ನು ಮೇಲ್‌ನೋಟಕ್ಕೆ ಹೇಳದೆ ಒಳನೋಟದಲ್ಲಿ ಕೆಳಜಾತಿಯ ಆಚರಣೆಗಳನ್ನು ವಿರೋಧಿಸಿದಂತೆ ಕಂಡುಬರುತ್ತಾರೆ.

ರಾಮರಾಯರು ತಮ್ಮ ಚರ್ಚೆಯಲ್ಲಿ ಹಲವಾರು ವಿಚಾರಗಳಲ್ಲಿ ಬದಲಾವಣೆಯನ್ನು ಬಯಸುತ್ತಾರೆ. ಶಿಕ್ಷಣದವಿಚಾರದಲ್ಲಿ ವಿಧವಾಪದ್ಧತಿ, ವರ್ಣಭೇದ, ಮದ್ಯಪಾನ, ಸಂಸ್ಕೃತಿ ಮುಂತಾದವುಗಳಲ್ಲಿ

ಕ್ರಾಂತಿಯಾಗುವಂತಹ ಬದಲಾವಣೆಯನ್ನು ಬಯಸುವ ಅವರು ಅಸ್ಪೃಶ್ಯತೆಯ ವಿಚಾರದಲ್ಲಿ ಮಾತನಾಡುವಾಗ ಅದರ ಸುಧಾರಣೆಯನ್ನು ಕಾಲದ ಗಣನೆಗೆ ಬಿಡುತ್ತಾರೆ. ಇದು ರಾಯರಲ್ಲಿನ ಜಾತಿವಾದದ ಛಾಯೆಯಂತೆ ಕಂಡುಬರುತ್ತದೆ. ಅಸ್ಪೃಶ್ಯತೆ ಆಚರಣೆ ರಾಯರಲ್ಲಿ ಒಪ್ಪಿತ ವಿಷಯವಾಗಿದೆ. ಅಸ್ಪೃಶ್ಯತೆಯನ್ನು ವಿರೋಧಿಸಿದಂತಿಲ್ಲ, ಆ ಕಾಲಕ್ಕೆ ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ದಲಿತ ನಾಯಕರ ಹೋರಾಟಗಳು ನಡೆದಿದ್ದವು. ಈ ವಿಚಾರದಲ್ಲಿ ವಿರೋಧಿಸುವುದಿರಲಿ ಕಾಲದ ಗಣನೆಗೆ ಬಿಡುವುದು ಎನ್ನುವ ಮಾತು ಅವರಲ್ಲಿನ ಬ್ರಾಹ್ಮಣತನವನ್ನು ಸ್ಪಷ್ಟಪಡಿಸುತ್ತದೆ. ಅನ್ಯಾಯ, ಕೆಟ್ಟ ಆಚರಣೆಗಳು, ಘೋರವಾದವುಗಳನ್ನು ನಿಲ್ಲಿಸಬೇಕು ಎನ್ನುವ ರಾಯರು, ಮನುಷ್ಯರ ನಡುವಿನ ಇಂತಹ ತಾರತಮ್ಯದ ಬಗ್ಗೆ ಮಾತ್ರ ಮೌನ ತಾಳಿದ್ದಾರೆ. ಆಕಾಶವಾಣಿಯಲ್ಲಿ ನಡೆದ ಈ ಚರ್ಚೆಯಲ್ಲಿ ಅಸ್ಪೃಶ್ಯತೆ ವಿಚಾರ ಬಂದಾಗ ಸ್ಪಷ್ಟವಾದ ನಿರ್ಧಾರ ತಿಳಿಸಿದಂತಿಲ್ಲ. ಹಲವು ಸುಧಾರಣೆಯ ವಿಚಾರದಲ್ಲಿ ಕ್ರಾಂತಿಯನ್ನು ಸಾರುವ ರಾಯರು ಅವರಲ್ಲಿನ ಒಪ್ಪಿತ ವಿಷಯಗಳಲ್ಲಿ ಜಾರಿಕೊಂಡಿರುವುದು ಸ್ಪಷ್ಟವಾಗುತ್ತಿದೆ.

### ೩. ಅಂದು ಸ್ಥಳದ ಧಣಿ ಇಂದು ಅಧಿಕಾರಿಗಳ ಋಣಿ

ಸಮಾಜವು ಕಾಲಾಂತರದಲ್ಲಿ ಅನೇಕ ಬದಲಾವಣೆಗೊಳ್ಳುತ್ತದೆ. ಹೀಗಾಗಿ ವ್ಯಕ್ತಿಯ ವಿವೇಚನೆಯು ಭಿನ್ನವಾಗಿಯೇ ಕಾಣುತ್ತದೆ. ಹಿಂದಿನ ಮತ್ತು ಇಂದಿನ ಕಾಲದಿಂದಲೂ ಬಂದ ಹಲವಾರು ವಿಚಾರಗಳಲ್ಲಿ ಮಾರ್ಪಡು ಹೊಂದುವುದು ಅನಿವಾರ್ಯತೆಯಾಗಿದೆ. ಇಂತಹ ವಿಚಾರಗಳಲ್ಲಿ ಎಷ್ಟರ ಮಟ್ಟಿಗೆ ಸಮಾಜ ಮುಖಿಯಾಗಿ ನಿಲ್ಲುತ್ತವೆ. ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯ ಮೇಲಿನ ಪರಿಣಾಮಗಳು ಮುಖ್ಯವೆನಿಸುತ್ತವೆ. ನವರತ್ನ ರಾಮರಾವ್‌ರು ಸ್ವಾತಂತ್ರ ಪೂರ್ವ ಮತ್ತು ಅನಂತರ ಕಾಲದಲ್ಲಿ ಸಮಾಜದಲ್ಲಾದ ಬದಲಾವಣೆಗಳನ್ನು ಗುರುತಿಸುವುದು ಈ ಲೇಖನದ ಆಶಯವಾಗಿದೆ.

ನವರತ್ನ ರಾಮರಾವ್‌ರು ಆಕಾಶವಾಣಿಯಲ್ಲಿ ಪ್ರಸಾರಗೊಂಡ ಮೂರನೆ ಲೇಖನವಾಗಿದೆ. ಈ ಲೇಖನವು 'ಪ್ರಜಾವಾಣಿ' ಪತ್ರಿಕೆಯಲ್ಲಿ ಪ್ರಕಟಗೊಂಡು ಜನಪ್ರಿಯತೆಗಳಿಸಿದ್ದು ಇದರ ವಿಶಿಷ್ಟತೆಗೆ ಸಾಕ್ಷಿಯಾಗಿದೆ. ರಾಮರಾವ್‌ರು ನಿವೃತ್ತಿಯ ಕಾಲದಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ ತಾಲ್ಲೂಕು ಒಂದರಲ್ಲಿ ತಹಸೀಲ್ದಾರ್‌ರ ಮೇಲೆ ಕೈ ಮಾಡಿದ ಒಬ್ಬ ರೈತನಿಗೆ ಮ್ಯಾಜಿಸ್ಟ್ರೇಟು ಕೋರ್ಟಿನಲ್ಲಿ ಜುಲ್ಮಾನೆಯಾಗಿರುವ ಸುದ್ದಿಯನ್ನು ಓದಿದ ಅವರಿಗೆ ಅರವತ್ತು ವರ್ಷಗಳ ಹಿಂದಿನ ಘಟನೆಯು ನೆನಪಿಗೆ ಬರುತ್ತದೆ. ಈ ಪತ್ರಿಕೆಯ ಪ್ರೇರಣೆಯಿಂದಾಗಿ ಆಕಾಶವಾಣಿಯಲ್ಲಿ ಪ್ರಸಾರಗೊಂಡು ಮಾಹಿತಿಯಲ್ಲಿ ಸ್ವಾತಂತ್ರಪೂರ್ವ ಮತ್ತು ಸ್ವಾತಂತ್ರ್ಯ ನಂತರದಲ್ಲಿ ಅಧಿಕಾರಿಗಳಿಗೆ ಮತ್ತು ಸಮಾಜಕ್ಕೂ ಇರುವ ವ್ಯಾತ್ಯಾಸಗಳನ್ನು ಗುರುತಿಸುವ ಲೇಖನವಾಗಿಸಿದ್ದಾರೆ.

ವಿವಿಧ ವೃತ್ತಿಗಳನ್ನು ನಿರ್ವಹಿಸಿದ್ದ ರಾಮರಾವ್‌ರು ಜನಪದದ ನಿಕಟ ಸಂಬಂಧದಲ್ಲಿ ಪ್ರಜೆಗಳ ಮನೋಭಾವವನ್ನು ಹತ್ತಿರದಿಂದಲೇ ಬಲ್ಲವರಾಗಿದ್ದಾರೆ. ಅವರ ಕಾಲದಲ್ಲಿ ಅಧಿಕಾರಿಗಳಿಗೆ ಕೊಡುತ್ತಿದ್ದ

ಗೌರವ, ಭಕ್ತಿ, ನಂಬಿಕೆ, ಪ್ರೇಮ, ಸೇವೆಯು ಸ್ವಾಭಾವಿಕವಾಗಿ ಸಲ್ಲುವಂತಿದ್ದವು. ವಿವಿಧ ತಾಲ್ಲೂಕುಗಳಲ್ಲಿ ಅಮಲ್ದಾರರಾಗಿದ್ದ ರಾಮರಾವ್‌ರು ಸ್ಥಳದ ಧಣಿಗಳಾಗಿದ್ದರು. ಜನಸಾಮಾನ್ಯರ ಕಷ್ಟ ಸುಖಗಳಲ್ಲಿ ಭಾಗಿಗಳಾಗಿ ಅವರ ತಪ್ಪುಗಳನ್ನು ಸರಿಪಡಿಸುವಂತಿದ್ದರು. ಅಧಿಕಾರಿಗಳು ಜನರ ಮನಸ್ಸಲ್ಲಿ ಕುಟುಂಬದ ಯಜಮಾನನಂತಿದ್ದು ಜವಾಬ್ದಾರಿಯನ್ನು ಹೊರಬೇಕಾಗಿತ್ತು. ಆಧುನಿಕತೆಯಲ್ಲಿ ಅಧಿಕಾರಿಗಳ ಮೇಲೆ ಕೈ ಮಾಡುವುದು ಸಮಾಜದಲ್ಲಾದ ಬದಲಾವಣೆಗಳನ್ನು ತೋರಿಸುತ್ತದೆ.

ಸ್ವಾತಂತ್ರ ಪೂರ್ವದಲ್ಲಿ ಬ್ರಿಟೀಷರ ಆಡಳಿತ ಮತ್ತು ಸ್ಥಳೀಯ ರಾಜಮನೆತನಗಳ ಗೌರವದ ವಿಷಯವೇ ಪ್ರಧಾನ ಚರ್ಚೆಯಾಗಿತ್ತು. ರಾಜ ಮನೆತನದ ಆಡಳಿತದ ಸ್ವಂತಿಕೆ ಉಳಿಸಿಕೊಳ್ಳುವ ಬ್ರಿಟೀಷರನ್ನು ಜನಸಾಮಾನ್ಯರಿಂದ ದೂರವಾಗಿಸುವ ಮನೋಭಾವ ಅಧಿಕಾರಿಗಳಲ್ಲಿತ್ತು. ಬ್ರಿಟೀಷರ ನಿಷ್ಪಕ್ಷಪಾತ ನ್ಯಾಯಪರತೆಗಳನ್ನು ದೇಶಿಯತೆಯಲ್ಲಿ ಅವಲಂಬಿಸಬೇಕಾಯಿತು. ಹೀಗಾಗಿ ಎರಡು ಕಾನೂನುಗಳ ಮಧ್ಯೆ ಕಂದರ ಏರ್ಪಟ್ಟಿತ್ತು. ಬ್ರಿಟೀಷ್ ಆಡಳಿತದ ದರ್ಪವನ್ನು ರಾಮರಾವ್‌ರು ಬಲವಾಗಿ ವಿರೋಧಿಸುತ್ತಿದ್ದರು. ಬ್ರಿಟೀಷರ ಆಡಳಿತ ನೀತಿಯ ಕೊನೆಗಣನೆಯೇ ಮಹಾರಾಜರ ಆಡಳಿತದ ಏಳಿಗೆಯೋ ಸರ್ಕಾರದ ಅಧಿಕಾರಿಗಳು ಪ್ರಮಾಣೀಕವಾಗಿ ದಕ್ಷತೆಯನ್ನು ಮೆರೆದದ್ದು ಜನಸಾಮಾನ್ಯರ ಮನದಲ್ಲಿ ಉಳಿದುಕೊಂಡಿದ್ದರು. ರಾಮರಾವ್‌ರು ಬ್ರಿಟೀಷ್ ಆಡಳಿತಕ್ಕೆ ಸವಾಲು ನೀಡುವ ದಕ್ಷತೆಯನ್ನು ಮೆರೆದವರಾಗಿದ್ದಾರೆ. ಮೈಸೂರು ಸರ್ಕಾರದಲ್ಲಿ ಕೀರ್ತಿಗೆ ಪಾತ್ರರಾಗಿದ್ದಾರೆ. ಮೈಸೂರು ಬ್ರಿಟೀಷರ ಆಡಳಿತದ ಒಂದು ಭಾಗವಾಗಿದ್ದರೂ ಬ್ರಿಟೀಷರನ್ನು ಎಲ್ಲಿಯೂ ಗುರುತಿಸಿಕೊಂಡವರಲ್ಲ. ಅವರನ್ನು ದರ್ಪದ ರಾಕ್ಷಸರೆಂದೇ ಕರೆದಿದ್ದಾರೆ.

ಎರಡು ಆಡಳಿತದಲ್ಲಿ ಕಾರ್ಯ ನಿರ್ವಹಿಸಿದ್ದರೂ ದೇಶಿಯತೆಯನ್ನೇ ಎತ್ತಿ ಹಿಡಿದಿದ್ದಾರೆ. ಗ್ರಾಮಗಳಲ್ಲಿನ ಬದುಕು ಜನರನ್ನು ನಗರಗಳ ಕಡೆ ಆಕರ್ಷಿಸುವುದು. ಸಂಸ್ಕೃತಿಯಲ್ಲಿನ ಆಚಾರ ವಿಚಾರಗಳನ್ನು ಮರೆಯಾಗಿಸುತ್ತದೆ. ಗ್ರಾಮ ಜೀವನದ ರೀತಿಯೇ ಬೇರೆ. ಈಗಿನ ಮುಖಂಡರು ಹಿಂದಿನ ಮುಖಂಡರಂತೆ ಅಲ್ಲ ಆಗ ಆಸ್ತಿ, ವಂಶ, ವ್ಯಕ್ತಿತ್ವ ಇವುಗಳ ಮೇಲೆ ತೂಕವಿತ್ತು. ಈಗ ಗೌರವವು ರಾಜಕೀಯ ಪುಡಾರಿಗಳ ಸ್ನೇಹ ಅವರುಗಳ ಅನುಗ್ರಹ, ಓಟುಗಳ ಮೇಲಿನ ಹತೋಟಿ ಇವುಗಳನ್ನು ಅವಲಂಬಿಸಿದೆ ಎಂದು ಹೇಳಿದ್ದಾರೆ.

ಆಧುನಿಕತೆಯ ರಾಜಕೀಯದಲ್ಲಿ ಜನರನ್ನು ಬಳಸಿಕೊಳ್ಳುವುದು ಪುಡಾರಿಗಳ ಗುಂಪುಗಳು ಅಧಿಕಾರಿ ವರ್ಗದ ಮೇಲೆ ದರ್ಪ ತೋರಿಸುತ್ತದೆ. ವೈಯಕ್ತಿಕ ಜೀವನವನ್ನು ವ್ಯವಹಾರಿಕ ದೃಷ್ಟಿಕೋನದಿಂದ ಸಾಗಿಸುವುದು ವಿಷಾದನೀಯವಾಗಿದೆ. ಸರ್ಕಾರಿ ಅಧಿಕಾರಿಗಳು ಇಂದು ಪುಡಾರಿಗಳಿಗೆ ಋಣಿಯಾಗಿದ್ದ ನಿದರ್ಶನಗಳು ಕಾಣುತ್ತೇವೆ. ಪುಡಾರಿಗಳೇ ಅಧಿಕಾರಿಗಳ ಮೇಲೆ ಹಿಡಿತವನ್ನು ಸಾಧಿಸಿದ್ದಾರೆ. ರಾಜಕೀಯ ಶಕ್ತಿಗಳು ಅಧಿಕಾರಿಗಳಿಗೆ ಬೆನ್ನೆಲುಬಾಗಿ ನಿಲ್ಲುವುದು ಇಂದಿನ ಮತ್ತು ಹಿಂದಿನ ಸ್ಥಿತಿಗತಿಗಳ ಚಿತ್ರಣಗಳನ್ನು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ.

ರಾಮರಾವ್ ಅವರ ವೃತ್ತಿ ಜೀವನದಲ್ಲಿ 'ಸ್ಥಳದ ಧಣಿ' ಎಂದೇ ಕರೆಯುತ್ತಿದ್ದವರು. ಅವರಿಗೆ ತೋರುತ್ತಿದ್ದ ಪ್ರೀತಿ, ವಿಶ್ವಾಸ, ಭಕ್ತಿಯು ಅಧಿಕಾರಗಳು ಮತ್ತು ಜನರ ನಡುವಿನ ಬಾಂಧವ್ಯ ತೋರುವಂತಿತ್ತು. ಸ್ವಾತಂತ್ರ್ಯ ನಂತರ ಒಬ್ಬ ಅಧಿಕಾರಿಯು ಮತ್ತೊಬ್ಬ ಅಧಿಕಾರಿಯ ಹಿಡಿತಕ್ಕೆ ಒಳಪಟ್ಟಿರುವುದು ಕಂಡು ಬರುತ್ತದೆ. ಅಧಿಕಾರಿಗಳ ನಡುವಿನ ಶ್ರೇಣಿಕರಣವು ತಾರತಮ್ಯಗಳನ್ನು ತಂದೊಡ್ಡಿ ಅಧಿಕಾರಿಗಳನ್ನು ಇಂದು ಋಣಿಗಳನ್ನಾಗಿ ಮಾಡಿದೆ ಎಂದಿದ್ದಾರೆ. ಆಧುನಿಕ ಕಾಲದಲ್ಲಿ ಅಧಿಕಾರಿಗಳು ಜನರ ದೃಷ್ಟಿಯಲ್ಲಿ ಹಿರಿಯರೂ ಅಲ್ಲ. ಗುರುಗಳೂ ಅಲ್ಲ, ಆಡಳಿತದ ಕಸುಬುದಾರರು ಮಾತ್ರ, ಇವರು ಗತಕಾಲದ ವೈಭವವನ್ನು ಮರೆತು, ತಮ್ಮ ಉದ್ಯೋಗದಲ್ಲಿ ಶ್ರೇಷ್ಠ ಕಸುಬುದಾರರಾಗಿ ಯಶಸ್ಸು ಗೌರವಗಳನ್ನು ಗಳಿಸಬೇಕೆ ಹೊರತು ಹುದ್ದೆಯ ದರ್ಪದಿಂದ ಹಿರಿಮೆ ಬರುತ್ತೆಂದು ತಿಳಿಯಬಾರದು" ಎಂದು ಅಧಿಕಾರಿಗಳ ಪ್ರಮಾಣೀಕತೆಯನ್ನು ತಿಳಿಸಿದ್ದಾರೆ.

ನವರತ್ನ ರಾಮರಾವ್ ಅವರು ಅಂದು ಸ್ಥಳದ ಧಣಿ ಇಂದು ಅಧಿಕಾರಿಗಳ ಋಣಿ ಲೇಖನವನ್ನು ಆಗಿನ, ಈಗಿನ ಕಾಲದ ವಾಸ್ತವದ ಚಿತ್ರಣಗಳನ್ನು, ಕಾಲದಲ್ಲಿನ ಬದಲಾವಣೆಯ ಪ್ರಗತಿಯ ಪ್ರಮಾಣವನ್ನು ಅವಲೋಕನವನ್ನು ಮಾಡಿದ್ದಾರೆ. ಅವರ ಬರಹಗಳೇ ಅಪಾರ ಅನುಭವಗಳಿಂದಲೇ ಹೊರತೆಗದಂತಿವೆ. ಇಂತಹ ಜೀವನಾನುಭವಗಳೇ ಶ್ರೇಷ್ಠ ಕಲಾಕೃತಿಯಾಗಿಸುವಲ್ಲಿ ಅವರಲ್ಲಿನ ಅನನ್ಯ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿ ನಿಲ್ಲುತ್ತವೆ.

* * *

## ಅಧ್ಯಾಯ - ಆರು

# ಕೆಲವು ನೆನಪುಗಳು ಆತ್ಮಕಥೆಯ ಕುರಿತ ಅಧ್ಯಯನ

ಸಾಹಿತ್ಯ ಕ್ಷೇತ್ರದಲ್ಲಿ ಕೃಷಿ ಮಾಡಿದ ಸಾಹಿತಿಗಳು ಕನ್ನಡದ ಮಟ್ಟಿಗೆ ಭಾಷೆಯ ಆಳ ಮತ್ತು ಅಗಲಗಳನ್ನು ತಿಳಿದುಕೊಂಡಿದ್ದರೆಂಬ ಪ್ರತೀತಿಯಿದೆ. ಸಾಹಿತ್ಯೇತರ ಕ್ಷೇತ್ರಗಳಲ್ಲಿ ಬೇರೆ ಬೇರೆ ಉದ್ಯೋಗಗಳನ್ನು ತೊಡಗಿಕೊಂಡ ಜನಗಳಿಗೆ ರೂಢಿಸಿಕೊಳ್ಳುವ ಮಾತು ದೂರವಾಗಿರುತ್ತದೆ. ಕನ್ನಡ ಸಾಹಿತ್ಯದ ಓದುಗಾರಿಕೆಯಿಂದ ಹಲವರಲ್ಲಿ ಬಹುಮುಖ್ಯವಾದ ಮಾರ್ಪಡು ಹೊಂದಿರುವುದನ್ನು ಕಾಣುತ್ತೇವೆ. ಸಾಹಿತ್ಯದಲ್ಲಿ ಹೆಸರು ಮಾಡಿದ ಹಲವಾರು ಲೇಖಕರಲ್ಲಿ ಮಾಸ್ತಿ, ಎಂ.ಆರ್.ಶ್ರೀ, ಪು.ತಿ.ನ, ಸಿದ್ಧಯ್ಯ ಪುರಾಣಿಕ, ಹೆಚ್.ನರಸಿಂಹಯ್ಯ, ಬೀ.ಚಿ, ಮೊದಲಾದವರು ಪ್ರಮುಖರು. ಕೆಲವರು ಇಂಗ್ಲೀಷ್ ಸಾಹಿತ್ಯದ ಉಪಾಸಕರಾಗಿಯೂ ಕನ್ನಡದಲ್ಲಿ ಅದ್ವಿತೀಯ ಕೃತಿಗಳನ್ನು ರಚನೆಮಾಡಿ ಕನ್ನಡ ಸಾಹಿತ್ಯಕ್ಕೆ ಹೊಸ ಆಯಾಮಗಳನ್ನು ಕಟ್ಟಿಕೊಟ್ಟಿದ್ದಾರೆ. ವಸಾಹತುಶಾಹಿ ಕಾಲದಲ್ಲಿ ವಿವಿಧ ವೃತ್ತಿಪರರು ಸಾಹಿತ್ಯದ ಬೆಳವಣಿಗೆಗೂ ಸಾಕ್ಷಿಯಾಗಿದ್ದಾರೆ.

ಹೊಸಗನ್ನಡ ಸಾಹಿತ್ಯ ಚರಿತ್ರೆಯಲ್ಲಿ 'ಕೆಲವು ನೆನಪುಗಳು' ಕೃತಿಯ ಮೂಲಕ ಅಮರರಾಗಿ ಉಳಿದಿರುವ ನವರತ್ನ ರಾಮರಾವ್‌ರು ವಿಶಿಷ್ಟವಾಗಿ ಕಂಡು ಬರುತ್ತಾರೆ. ವಸಾಹತು ಶಾಹಿಕಾಲದಲ್ಲಿ ಉನ್ನತ ಹುದ್ದೆಗಳನ್ನು ಕಾರ್ಯ ನಿರ್ವಹಿಸಿದ ಅವರು ಸಾಹಿತ್ಯಾಸಕ್ತರಾಗಿದ್ದರೆಯೇ ಹೊರತು ಕೃತಿಯ ರಚನೆಯ ಬಗ್ಗೆ ಆಲೋಚಿಸಿದವರಲ್ಲ. ಮಿತ್ರರ ಪ್ರೇರಣೆ, ಕನ್ನಡದ ಮೇಲಿನ ಪ್ರೀತಿ,ಕನ್ನಡ ಸಾಹಿತ್ಯಕ್ಕೆ ಕೊಡುಗೆ ನೀಡಬೇಕೆನ್ನುವ ಹಂಬಲದಿಂದಾಗಿ 'ಕೆಲವು ನೆನಪುಗಳು' ಕೃತಿಯನ್ನು ಬರೆಯಲು ಸಾಧ್ಯವಾಯಿತು. ಲೇಖಕ ಅಧಿಕಾರಾವಧಿಯಲ್ಲಿ ನೆನಪಿಗೆ ಬಂದ ಅನುಭವಗಳನ್ನು ದಾಖಲಿಸಿರುವುದೇ ಈ ಕೃತಿಯ ವಿಶೇಷತೆಯಾಗಿದೆ. ಹೀಗಾಗಿಯೇ ಇದೊಂದು ಆತ್ಮಕಥೆ ಎನಿಸಿಕೊಳ್ಳುತ್ತದೆ. ಓದುಗರ ದೃಷ್ಟಿಯಲ್ಲಿ ಕಾದಂಬರಿಯೋ, ಸಾಹಸಿಗನೊಬ್ಬನ ಪ್ರವಾಸ ಕಥನವೋ ಎಂದೆನಿಸಿಬಿಡುತ್ತದೆ. ಲೇಖಕರ ಅನುಭವಗಳ

ಮಹತ್ವವನ್ನು ಅರಿತ ಮಾಸ್ತಿಯವರು ೧೯೫೧ರಲ್ಲಿ 'ಜೀವನ' ಪತ್ರಿಕೆಯಲ್ಲಿ ಹಂತ ಹಂತವಾಗಿಯೇ ಪ್ರಕಟಿಸಿದ್ದಾರೆ. ಪತ್ರಿಕೆಯಲ್ಲಿನ ಒಟ್ಟಾರೆ ಬರವಣಿಗೆಯನ್ನು ಲೇಖಕರ ಆಪ್ತರು ೧೯೫೪ರಲ್ಲಿ 'ಕೆಲವು ನೆನಪುಗಳು' ಪುಸ್ತಕವಾಗಿ ಪ್ರಕಟಿಸಿ ಅದರ ಅನನ್ಯತೆಯನ್ನು ಮೆರೆದಿದ್ದಾರೆ.

'ಕೆಲವು ನೆನಪುಗಳು' ಕೃತಿಯು ಆತ್ಮಕಥೆಗಳ ಸಾಲಿನಲ್ಲಿ ಪ್ರಧಾನವಾಗಿ ಗುರುತಿಸಿಕೊಂಡಿದೆ. ಲೇಖಕರ ವಿನ್ಯಾಸಕ್ರಮ, ನಿರೂಪಣಾ ವಿಧಾನ ಬರೆಯುವಾಗಿನ ಆಯ್ದುಕೊಂಡ ನೆನಪುಗಳು ಕೃತಿಯನ್ನು ಭಿನ್ನವಾಗಿ ಕಾಣುವಂತೆ ಮಾಡುತ್ತದೆ. ಇಂಗ್ಲೀಷ್ ಭಾಷೆ ಮತ್ತು ಸಾಹಿತ್ಯವನ್ನು ಮೆಚ್ಚಿಕೊಂಡಿದ್ದ ವ್ಯಕ್ತಿತ್ವವೊಂದು ಕನ್ನಡ ಸಾಹಿತ್ಯದ ಓದುಗಾರರನ್ನು ಆಸಕ್ತರಾಗಿ ಮಾಡುವುದಕ್ಕೆ ಅವರ 'ಕೆಲವು ನೆನಪುಗಳು' ಸಾಕ್ಷಿಯಾಗುತ್ತದೆ. ಸಹಜವಾಗಿಯೇ ನಾವುಗಳು ಭಾರತೀಯ ಇತಿಹಾಸ ಮತ್ತು ಕರ್ನಾಟಕ ಇತಿಹಾಸವನ್ನು ಅರಿತಿರುತ್ತೇವೆ. ಆದರೆ ಪ್ರಾಂತೀಯ ಇತಿಹಾಸವನ್ನು ತಿಳಿದಿರುವುದಿಲ್ಲ. ರಾಜಮನೆತನಗಳ ಇತಿಹಾಸಕ್ಕಿಂತಲೂ ನವರತ್ನರಾಮರಾವ್‌ರ ಅಧಿಕಾರಾವಧಿಯ ವೈಭವವೇ ಕುತೂಹಲಕಾರಿಯಾಗಿದ್ದು, ಸತ್ಯವೂ ಆಗಿದೆ. ಓದುಗಾರರನ್ನು ವಸಾಹತುಶಾಹಿಕಾಲದ ಲೇಖಕನ ಅನುಭವಗಳ ಜೊತೆಗೆ ಇತಿಹಾಸದ ವೈಶಿಷ್ಟ್ಯತೆಗಳನ್ನು ಪರಿಚಯಿಸುತ್ತಾ ಕರೆದೊಯ್ಯುತ್ತದೆ. ಮೈಸೂರು ಸರ್ಕಾರದ ಸಾಂಸ್ಕೃತಿಕ ವಿಶಿಷ್ಟತೆಯನ್ನೇ ಸಾರುತ್ತದೆ.

ನವರತ್ನ ರಾಮರಾವ್ ಅವರು ಮೂಲತಃ ಮರಾಠಿ ಮನೆತನದವರು. ಚಿಕ್ಕಂದಿನಿಂದಿಲೇ ಇಂಗ್ಲೀಷ್ ಭಾಷೆಯ ಪ್ರಭಾವಕ್ಕೆ ಒಳಗಾಗಿದ್ದರಿಂದ ಕನ್ನಡತನಕ್ಕೆ ಸಂಪೂರ್ಣವಾಗಿ ಒಗ್ಗಿಕೊಂಡವರಲ್ಲ. ಇಂಗ್ಲೀಷ್ ವಿದ್ಯಾಭ್ಯಾಸ ಬ್ರಿಟೀಷ್‌ರ ಒಡನಾಟ ಅವರನ್ನು ಕನ್ನಡದಿಂದ ದೂರವಾಗಿಸಿತ್ತು. ಲೇಖಕರ ಅಧಿಕಾರಾವಧಿಯಲ್ಲಿ ಸರ್ಕಾರಿ ಪತ್ರಗಳು, ಕಡತಗಳು, ಅರ್ಜಿಗಳಲ್ಲಿನ ಸಾಮಾನ್ಯವಾದ ಕನ್ನಡ ಬರವಣಿಗೆಯು ಶ್ರೇಷ್ಠ ಕೃತಿಯೊಂದು ರಚಿಸಿರುವುದು ಸೋಜಿಗವೇ ಸರಿ. ಅವರ ನಿವೃತ್ತಿ ಬದುಕಿನಲ್ಲಿ ಕನ್ನಡವನ್ನೇ ಪೂಜಿಸತೊಡಗಿದ್ದವರು. ಮಾಸ್ತಿಯವರ ಒಡನಾಟದಿಂದಾಗಿ ಕನ್ನಡ ಸಾಹಿತ್ಯದ ರಚನೆಗೆ ಪ್ರೇರಣೆಯಾಗಿತ್ತು. ಕೃತಿಯನ್ನು ರಚಿಸುವಾಗಿನ ಕಾಲಕ್ಕೆ ಭಾಷೆಯ ಬಳಕೆಯು ಲೇಖಕರನ್ನು ಕಾಡಿಸಿದಂತಿದೆ. ಕೃತಿಯ ಪ್ರಾರಂಭದಲ್ಲಿ ಭಾಷೆಯನ್ನು ಕುರಿತು ಹೇಳಿಕೊಂಡಿರುವುದು ಮತ್ತು ಭಾಷಾ ಬಳಕೆಯಲ್ಲಿನ ನಿರ್ಧಾರಗಳು ಕೃತಿಯನ್ನು ಸರಳವಾಗಿಸಿದಂತಿದೆ.

ರಾಮರಾವ್‌ರು ವೈಯಕ್ತಿಕ ಜೀವನವನ್ನು ದಾಖಲಿಸಲು ಹೋಗಿಲ್ಲ. ತಮ್ಮ ವೃತ್ತಿ ಬದುಕಿನಲ್ಲಿ ಸರಿಯೆನಿಸುವ ಘಟನೆಗಳನ್ನು ಬರೆದುಕೊಂಡಿದ್ದಾರೆ. ಈ ಕೃತಿಯಲ್ಲಿನ ಪಾತ್ರಗಳಲ್ಲಿ ನಿಷಪಕ್ಷಪಾತವು ಎದ್ದುಕಾಣುತ್ತದೆ. ತಮ್ಮ ಗಮನಕ್ಕೆ ಬಂದಿರುವ ಹತ್ತ ಹಲವಾರು ಪ್ರಸಂಗಗಳನ್ನು ಸರಮಾಲೆಯಂತೆ ಜೋಡಿಸಿದ್ದಾರೆ. ಲೇಖರು ಕೃತಿಯನ್ನು ಕುರಿತು ಹೆಮ್ಮೆಯಿಂದಲೇ ಹೇಳಿಕೊಂಡಿದ್ದು ಹೀಗೆ "ಈ ತರಹದ ಕಾವ್ಯಗಳು ಇತರ ಭಾಷೆಗಳಲ್ಲಿವೆ, ನನಗೆ ತಿಳಿದ ಮಟ್ಟಿಗೆ ಕನ್ನಡದಲ್ಲಿಲ್ಲ. ನನಗೆ ಕನ್ನಡದಲ್ಲಿ

ಪಾಂಡಿತ್ಯವಿಲ್ಲದಿದ್ದರೂ ಮುಕ್ಕಾಲು ಶತಮಾನ ಮನೆತನದ ಮಾತು, ನಾನು ಆಡಿದ ಮಾತನ್ನೇ ಬರೆದರೆ ಸಾಕು ಜನರು ಪದಗಳ ರಿಕ್ತತೆಯನ್ನು ಕ್ಷಮಿಸುವರು ಎಂಬ ನಂಬಿಕೆಯಿಂದ ಬರೆಯುತ್ತೇನೆ" ಎಂಬ ಮಾತುಗಳಲ್ಲಿ ಆತ್ಮವಿಶ್ವಾಸಿಯೊಬ್ಬನು ಸಂಕೋಚದಿಂದಲೇ ಹೇಳಿಕೊಂಡಿರುವುದು ಸ್ಪಷ್ಟವಾಗುತ್ತದೆ. ಸಾಹಿತ್ಯ ಭಾಷೆಯ ಚೌಕಟ್ಟನ್ನು ಹೊರತು ಪಡಿಸಿ ಬರೆದದ್ದು ಹೊಸತನದ ಚಿಂತನೆಗೆ ಸಾಕ್ಷಿಯಾಗಿತ್ತು.

ವ್ಯಕ್ತಿಯೊಬ್ಬನು ಆತ್ಮಕಥೆ ಬರೆಯುವಾಗ ಸಾಹಿತ್ಯಿಕ ಚಿಂತನೆಗಳು ಕಾಡುವುದು ಸಹಜ ರಾಮರಾವ್‌ಅವರ ಕಾಲಕ್ಕೆ ಸಾಹಿತ್ಯ ಕ್ಷೇತ್ರದ ಬೆಳವಣಿಗೆಯು ಅತ್ಯಂತ ಪರಿಣಾಮಕಾರಿಯಾಗಿತ್ತು. ಪಾರಂಪರಿಕ ಸಾಹಿತ್ಯಿಕ ಭಾಷೆಯ ಚೌಕಟ್ಟನ್ನು ಲೇಖಕರು ಸಡಿಲಗೊಳಿಸಿದಂತೆ ಕಂಡುಬರುತ್ತಾರೆ. ಕನ್ನಡ ಭಾಷೆಯಲ್ಲಿ ಉರ್ದು, ಮರಾಠಿ, ಹಿಂದಿ, ಇಂಗ್ಲೀಷ್ ಭಾಷೆಯನ್ನು ಬಳಸಿಕೊಂಡಿರುವುದು ತಿಳಿದು ಬರುತ್ತದೆ. ಇಂತಹ ಅನ್ಯ ಪದಗಳು ಪೂರಕವಾಗಿದ್ದು ಕೃತಿಯನ್ನು ಮತ್ತಷ್ಟು ಸೊಗಸಾಗಿ ಬರುವಂತೆ ಮಾಡಿದೆ. ವಸಾಹತುಶಾಹಿ ಕಾಲದಲ್ಲಿ ಬರೆದವರಾದರೂ ಪಾಶ್ಚಾತ್ಯರ ನೆನಪುಗಳಾಗಿ ಉಳಿದಿಲ್ಲ. ಆಧುನಿಕತೆಯ ಬದುಕನ್ನು ಸಾಗಿಸುತ್ತಿದ್ದರೂ ಬ್ರಿಟೀಷರನ್ನು ಪ್ರಬಲವಾಗಿಯೇ ವಿರೋಧಿಸುತ್ತಿದ್ದರು. ಇದಕ್ಕೆ ಸ್ವಾತಂತ್ರ್ಯ ಹೋರಾಟಗಳು ಮತ್ತು ಅವರಲ್ಲಿನ ರಾಷ್ಟ್ರೀಯವಾದಿತನವೂ ಕಾರಣವಾಗಿರುತ್ತದೆ.

**ಎದುರಾದ ಸಮಸ್ಯೆಗಳು : ಕಳ್ಳತನ, ಘಟನೆಗಳು**

ಬ್ರಿಟೀಷರ ಅಧೀನದಲ್ಲಿದ್ದ ಮೈಸೂರು ಸರ್ಕಾರದಲ್ಲಿ ಬ್ರಿಟೀಷ್ ಅಧಿಕಾರಿಗಳು ಉನ್ನತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅವರ ಕೈಕೆಳಗೆ ಭಾರತೀಯ ಅಧಿಕಾರಿಗಳು ಕೆಲಸ ಮಾಡಬೇಕಿತ್ತು. ಲೇಖಕರು ಬಲವಾಗಿ ವಿರೋಧಿಸುತ್ತಿದ್ದವರಾಗಿಯೂ ಕಾರ್ಯನಿರ್ವಹಿಸಬೇಕಿತ್ತು. ಯಡತೊರೆಗೆ ಹೊಸದಾಗಿ 'ಇನ್‌ಚಾರ್ಜ್' ತೆಗೆದುಕೊಂಡ ಸಂದರ್ಭದಲ್ಲಿ ಸ್ಪರ್ಕ್ ಸಾಹೇಬರ ವಿರೋಧ ಹಾಕಿಕೊಳ್ಳುವ ಸಂದರ್ಭ ಬಂದಿತು. ಹಿರಿಯ ಅಧಿಕಾರಿಯನ್ನು ಕಿರಿಯ ಅಧಿಕಾರಿಗಳು ಸ್ವಾಗತಿಸಿಕೊಳ್ಳುವ ಸಂಪ್ರದಾಯಗಳು ಹಿಂದಿಗೂ ಮತ್ತು ಇಂದಿಗೂ ಪ್ರಸ್ತುತವಾಗಿವೆ. ಗುಮಾಸ್ತನ ತಪ್ಪು ಮಾಹಿತಿಯಿಂದ ಸ್ವಾಗತಿಸಲು ಹೋಗದೇ ಸ್ಪರ್ಕ್‌ರ ಕೋಪಕ್ಕೆ ತುತ್ತಾಗುತ್ತಾರೆ. ಅದಿಕಾರಿಯಿಂದ ಕ್ಷಮಾಪಣೆಯನ್ನು ಬಯಸುತ್ತಾರೆ. ವಸಾಹತುಶಾಹಿ ಕಾಲದಲ್ಲಿ ಬ್ರಿಟೀಷರ ವಿರುದ್ಧ ದನಿ ಎತ್ತುವುದೇ ಕಷ್ಟವಾಗಿತ್ತು. ರಾಮರಾವ್‌ರಲ್ಲಿ ಆತ್ಮಗೌರವದಿಂದ ಕೂಡಿದ ದಕ್ಷ ವ್ಯಕ್ತಿತ್ವದ ನಿದರ್ಶನವಾಗಿದೆ.

ಮೈಸೂರು ಜಿಲ್ಲೆ ಸಾಂಸ್ಕೃತಿಕ ಜಿಲ್ಲೆಯೆಂದೇ ಪ್ರಸಿದ್ಧಿ ಪಡೆದಿದ್ದು. ಪ್ರಾಚೀನ ಕಾಲದಿಂದಲೂ ಜಾತ್ರೆಗಳು, ಆಚರಣೆಗಳು, ವಿಶೇಷವಾಗಿ ನಡೆಯುತ್ತಿದ್ದವು. ಲೇಖಕರು ಚುಂಚನಕಟ್ಟೆಯಲ್ಲಿ ಅಧಿಕಾರವಹಿಸಿಕೊಂಡಾಗ ವಿಶೇಷವಾದ ಜಾತ್ರೆಯೇ ನಡೆಯುತ್ತಿತ್ತು. ಅಮಲ್ದಾರರಾದ ಲೇಖಕರು ಇಡೀ ಜನಸಂದಣಿಯನ್ನು ಹತೋಟಿಯಲ್ಲಿ ಇಡಬೇಕಾಗಿತ್ತು. ಇಂತಹ ಸಂದರ್ಭದಲ್ಲಿ ಬಲಿಷ್ಠವಾದ ದಾಂಡಿಗನೊಬ್ಬನು ಹೆಂಗಸರೊಂದಿಗೆ ಅಸಭ್ಯ ರೀತಿಯ ವರ್ತನೆಯನ್ನು ಕಂಡು ಅವನನ್ನು ನೆಲಕ್ಕೆ ಬೀಳಿಸಿ

ಶಿಕ್ಷೆಯನ್ನು ನೀಡಿದರು. ಈ ಸನ್ನಿವೇಶವೂ ಲೇಖಕರಿಗೆ ಹೆಸರನ್ನು ತಂದುಕೊಟ್ಟಿತ್ತು. ಅವರಲ್ಲಿನ ಸಾಮರ್ಥ್ಯದ ಜೊತೆಗೆ ಚಾತ್ರೆಯ ಸನ್ನಿವೇಶವನ್ನು ತಿಳಿಸಿದ್ದಾರೆ.

ರಾಜಮನೆತನಗಳ ಕಾಲದಲ್ಲಿ ಕಳ್ಳತನ, ದರೋಡೆಗಳು ಸಾಮಾನ್ಯವಾಗಿದ್ದವು. ವಾಸ್ತವದಲ್ಲಿಯೂ ಅತಿರೇಕವಾದವುಗಳೇ, ಸಂಪ್ರದಾಯಿಕವಾಗಿ ಬಂದ ಕಾನೂನುಗಳ ತೊಡಕು ಹೆಚ್ಚಾಗಿದ್ದವು ಹಾಗಾಗಿಯೇ ಕಳ್ಳತನಗಳೂ ಈಗಿನಷ್ಟೆ ವ್ಯವಸ್ಥಿತವಾಗಿ ನಡೆಯುತ್ತಿದ್ದವು. ಚುಂಚನಕಟ್ಟೆಯಲ್ಲಿ ಬಡ ಬ್ರಾಹ್ಮಣ ಕುಟುಂಬದ ಆಭರಣಗಳ ಕಳವು ಅಮಲ್ದಾರರಾಗಿದ್ದ ರಾಮರಾವ್‌ರಿಗೆ ಸವಾಲಾಗಿತ್ತು. ವ್ಯವಸ್ಥಿತವಾಗಿ ಪ್ರಕರಣ ಬೇಧಿಸಿದ ರೀತಿಯೂ ಪತ್ತೆದಾರಿ ಕಾದಂಬರಿಗಿಂತಲೂ ಕುತೂಹಲಕಾರಿಯಾಗಿದೆ. ತಂದ್ರೆಲಿಂಗನಂತಹ ಕಳ್ಳನನ್ನು ಬೇಧಿಸಿ ಬ್ರಾಹ್ಮಣ ಕುಟುಂಬಕ್ಕೆ ಆಭರಣ ಹಿಂತಿರುಗಿಸುತ್ತಾರೆ. ಈ ಪ್ರಕರಣವು 'ಕೆಲವು ನೆನಪುಗಳು' ಕೃತಿಯಲ್ಲಿ ಬಹುಮುಖ್ಯವಾದ ಘಟನೆಯಾಗುತ್ತದೆ. ಅಧಿಕಾರಾವಧಿಯ ಪ್ರಾರಂಭವಾದ ಈ ಸಮಸ್ಯೆಯು ಅವರಿಗೆ ಕೀರ್ತಿಯನ್ನೇ ತಂದುಕೊಟ್ಟಿತ್ತು. ಕೃತಿಯ ಪ್ರಾರಂಭದಿಂದಲೂ ಸಮಸ್ಯೆಗಳನ್ನು ಹಂತ ಹಂತವಾಗಿಯೇ ಬೇಧಿಸಿದ ರೀತಿ ವಿಶಿಷ್ಟವೆನಿಸುತ್ತದೆ.

ರಾಮರಾವ್‌ರು ಯಡತೊರೆಯಲ್ಲಿ ಅಮಲ್ದಾರರಾಗಿದ್ದ ಸಂದರ್ಭದಲ್ಲಿ ಗುರುಕಾರರ ಪ್ರಕರಣವು ದೊಡ್ಡ ಸಮಸ್ಯೆಯಾಗಿಯೂ ಕಾಡುತ್ತದೆ. ಹಲವು ಸಮಸ್ಯೆಗಳನ್ನು ಪರಿಹಾರ ಮಾಡಿದ್ದ ಲೇಖಕರ ದಕ್ಷತೆಯನ್ನು ಅರಿತ ಸ್ಪರ್ಕ್ ಸಾಹೇಬರು ರಾಮರಾವ್‌ರಿಗೆ ಪ್ರಕರಣವನ್ನು ತೀರ್ಮಾನಿಸುವಂತೆ ಸೂಚಿಸುತ್ತಾರೆ. ಹೊನ್ನಮ್ಮನ ಆಸ್ತಿಯನ್ನು ಅಕ್ರಮವಾಗಿಯೇ ಸಂಪಾದಿಸಿದ್ದ ಗುರುಕಾರರನ್ನು ವಿಚಾರಣೆಯನ್ನು ನಡೆಸುತ್ತಿದ್ದ ಅವರಿಗೆ ಹಲವಾರು ಸಮಸ್ಯೆಗಳೇ ಎದುರಾಗುತ್ತೇವೆ. ಸಹಜವಾಗಿಯೇ ಜಾತಿ ಜಾತಿಗಳ ನಡುವೆ ವೈಮನಸ್ಸು ಮೂಡುವುದು ಇಂದಿಗೂ ವಾಸ್ತವವೇ, ಬ್ರಾಹ್ಮಣರಾದ ಲೇಖಕರು ಲಿಂಗಾಯುತರನ್ನು ವಿರೋಧಿಸುವೆಂಬಂತೆ ಅವರ ಮೇಲೆಯೇ ಸ್ಪರ್ಕ್‌ರಲ್ಲಿ ದೂರುತ್ತಾರೆ. ಎರಡು ಉನ್ನತ ಜಾತಿಗಳ ನಡುವೆ ಹಿಂದಿನಿಂದಲೂ ವೈಷಮ್ಯಗಳನ್ನು ಲೇಖಕರು ಗುರುತಿಸುತ್ತಾರೆ. ನ್ಯಾಯಾಧೀಶರ ಸ್ಥಾನದಲ್ಲಿದ್ದ ರಾಮರಾವ್‌ರಿಗೆ ಜಾತಿಗಳಿಗಿಂತಲೂ ನ್ಯಾಯಯುತವಾದ ತೀರ್ಮಾನವೇ ಪ್ರಮುಖವಾಗಿತ್ತು. ಈ ಕಾರಣದಿಂದಲೇ ಪ್ರಮಾಣಿಕನಾದ ಅಮಲ್ದಾರರಿಗೆ ಜಿಲ್ಲಾಧಿಕಾರಿಗೆ ದೂರುದಾಖಲಿಸಿ ವಿಫಲರಾಗುತ್ತಾರೆ. ಗುರುಕಾರರ ವಿಚಾರಣೆ ಸಂದರ್ಭದಲ್ಲಿ ಕಿರುಕುಳವನ್ನೇ ಕೊಡುತ್ತಾರೆ. ಎಲ್ಲಾ ಸಮಸ್ಯೆಗಳ ನಡುವೆಯೂ ಗುರುಕಾರರ ಮೇಲಿನ ಕೇಸು ಸಾಬೀತಾಗಿ ಶಿಕ್ಷೆಯನ್ನು ವಿಧಿಸುತ್ತಾರೆ. ವಿಚಾರಣೆಯ ವೇಳೆ ವಕೀಲರು ಟೆನ್ನಿಸ್ ಆಡುವ ಕೋರ್ಟಿನಲ್ಲಿ ತಮ್ಮ ವಾದ ಮಾಡುತ್ತ ಬರುವುದು ಹಾಸ್ಯವಾಗಿ ಚಿತ್ರಿಸಿದ್ದಾರೆ. ಕಿರುಕುಳದ ಜೊತೆಯಲ್ಲಿಯೂ ಲೇಖಕರು ಹಾಸ್ಯದ ಸನ್ನಿವೇಶವನ್ನು ಗುರುತಿಸುತ್ತಾರೆ.

'ಕೆಲವು ನೆನಪುಗಳು' ಕೃತಿಯಲ್ಲಿ ತಂದ್ರೆಲಿಂಗನ ಕಳ್ಳತನ ಪ್ರಸಂಗ ಪತ್ತೆದಾರಿ ಕತೆಯಂತೆ ಬೆಳೆದುಕೊಂಡಂತಿದೆ. ತನ್ನ ಜಮೀನಿನ ಕಂದಾಯವನ್ನು ಬೇರೆಯವರು ಕಟ್ಟಿಕೊಂಡಿದ್ದು ಅವನ ವರ್ತನೆಗೆ

ಯುವಕನನ್ನು ಜೈಲಿಗೆ ಕಳಿಸಿ ಬುದ್ಧಿ ಬರಲಿ ಎಂದು ಹೇಳುತ್ತಾ ಗಂಡ ಹೆಂಡಿರ ಕಡೆಗೆ ನೋಡುತ್ತಾರೆ. ಅವರಿಬ್ಬರಲ್ಲಿ ಮೊದಲು ಕೋಪ, ಅಮೇಲೆ ಕನಿಕರ, ಆ ಮೇಲೆ ಪಾಶ್ಚಾತಾಪ ತುಂಬಿದ ಪ್ರೇಮವನ್ನು ಕಾಣುತ್ತಾರೆ. ಹೆಣ್ಣುಮಗಳು ರಾಯರಲ್ಲಿ ಕ್ಷೇಮೆಯಾಚಿಸಿ ಬಿಡುಗಡೆ ಮಾಡುವಂತೆ ಬೇಡಿಕೊಳ್ಳುತ್ತಾಳೆ. ಅಮಲ್ದಾರರು ಇಬ್ಬರಿಗೂ ಸುಖಸಂಸಾರ ನಡೆಸುವಂತೆ ತಿಳಿಹೇಳಿ ಹಾರೈಸುತ್ತಾರೆ.

ಮತ್ತೊಂದು ಪ್ರಸಂಗದಲ್ಲಿ ಗಂಡನ ನಿರಂತರ ಬದುಕಿಗೆ ಬೇಸತ್ತ ಹೆಂಡತಿಯು ಅವನ ಪ್ರೀತಿ ಕಾಣದೆ ಪರಪುರುಷನೊಂದಿಗೆ ಹೋಗಿದ್ದು, ಆ ಯುವಕನ್ನು ಲೇಖಕರಲ್ಲಿ ಬೇಡಿಕೊಳ್ಳುತ್ತಾನೆ. ಅವನ ಹೆಂಡತಿಗೂ ಬುದ್ಧಿವಾದ ಹೇಳಿ ಯುವಕನಿಗೂ ಬುದ್ಧಿವಾದ ಹೇಳಿ ಅವರನ್ನು ಕಳುಹಿಸಿದರು. ಆ ಕಾಲದ ಅಮಲ್ದಾರರೆಂದರೆ ಕೇವಲ ಅಧಿಕಾರಿಯಾಗಿದ್ದಿಲ್ಲ 'ಸ್ಥಳದತಾಯಿ' ಎಂದೇ ಕರೆಯಲ್ಪಡುವ ಇವರ ಕಾರ್ಯ ತಾಲ್ಲೂಕಿನ ಪ್ರತಿಯೊಂದು ಘಟನೆಗಳಿಗೆ ಸಾಕ್ಷಿಯಾಗಿದ್ದಾರೆ. ಆ ಕಾಲಕ್ಕೆ ಕುಟುಂಬಗಳ ಹಿರಿಯನಂತೆ, ಹಿತೈಷಿಯಂತೆ ಕಂಡುಬರುತ್ತಾರೆ.

ರಾಮರಾವ್‌ರು ಬ್ರಾಹ್ಮಣರಾದರೂ ಯುವಕರಾಗಿದ್ದಾಗ ಗರಡಿಮನೆಗೆ ಹೋಗಿ ಕಸರತ್ತು ಮಾಡುತ್ತಿದ್ದವರು. ಮೈಸೂರು ಸರ್ಕಾರದ ಅಧಿಕಾರಿಗಳು ಸಾಹಿಸಿಗಳಾಗಿಯೂ ಕಂಡು ಬರುತ್ತಾರೆ. ವಸಾಹತುಶಾಹಿ ಕಾಲದಲ್ಲಿ ಭಾರತಕ್ಕೆ ಆಗಮಿಸಿದ ಬ್ರಿಟೀಷರಲ್ಲಿನ ದರ್ಪತನ ಹೋಗಲಾಡಿಸುವ ಸ್ವಂತಿಕೆಯ ದೇಸಿತನವನ್ನು ಎತ್ತಿ ಹಿಡಿಯುವ ಮನೋಭಾವದವರಾಗಿದ್ದಾರೆ. ಇರಾನಿ ಯುವಕರ ಪಡೆಯ ಯುವಕರು ಮೀಸೆ ತಿರುವಿ ಈ ಗ್ರಾಮದ ಮೇಲೆ ನನ್ನ ಸವಾಲು, "ಯಾರಾದರೂ ನನ್ನ ಸಂಗಡ ಕುಸ್ತಿ ಮಾಡುವ ಗಂಡಸರಿದ್ದರೆ ಬನ್ನಿ ನೋಡೋಣ ಇಲ್ಲವಾದರೆ ನಿಮ್ಮ ಹೆಂಗಸರನ್ನು ಕಳಿಸಿಕೊಡಿ" ಎಂದು ಸವಾಲು ಕೋಲಾಹಲ ಉಂಟುಮಾಡಿತ್ತು. ದೊಂಬಿಯಾಗುವ ಮುಂಚೆಯೇ ಸ್ಥಳಕ್ಕೆ ಹೋಗಿ, ನಡೆದ ವಾರ್ತೆಯನ್ನು ತಿಳಿದು ಅಮಲ್ದಾರರು ಮೈಸೂರಿನ ಹಿರಿಮೆ, ತಮ್ಮ ಅಧಿಕಾರದ ದಕ್ಷತೆ ತೋರಿಸುವ ಉದ್ದೇಶದಿಂದ ಇರಾನಿ ಪೈಲ್ವಾನರಸ್ನು ಬೈದು ಬೈಸಿಕಲ್ಲನ್ನು ಬಲಗೈಲಿ ಎತ್ತಿಹಿಡಿದು ಮುಂದೆ ನೇರವಾಗಿ ತೋಳನ್ನು ಚಾಚಿ ಹಿಡಿದರು. ಇಂತಹ ಅಭ್ಯಾಸಕ್ಕೆ ಸ್ನಾಯುಗಳ ಅನೋನ್ಯ ಸಹಕಾರ ಮತ್ತು ಕೇಂದ್ರೀಕರಣ ಬೇಕು ಎನ್ನುತ್ತಾರೆ. ಇರಾನಿಯುವಕರು ಪ್ರಯತ್ನಿಸಿ ವಿಫಲರಾಗಿ ಕ್ಷೇಮೆ ಕೇಳಿದರು. ಜವಾಬ್ದಾರಿಯುತ ಸ್ಥಾನದಲ್ಲಿನ ಮಹತ್ವತೇಯನ್ನು ಸ್ಥಳದ ಧಣಿಯೆಂಬ, ಬಹದ್ದೂರ್ ಅಮಲ್ದಾರ್ ಎನ್ನುವಂತಹ ಪ್ರಶಂಸೆಯನ್ನು ಕಾಪಾಡುತ್ತಾರೆ. ಲೇಖಕರು ಕೃತಿಯಲ್ಲಿ ತಮ್ಮ ಅನುಭವಗಳನ್ನೇ ದಾಖಲಿಸಿ ಕೊಳ್ಳಲು ಹೋದವರಲ್ಲ, ತಮಗೆ ಸರಿ ಎನಿಸಿದ ಎಷ್ಟೋ ಪಾತ್ರಗಳು ನೆನಪಿನಲ್ಲಿ ಉಳಿಯುವಂತೆ ಮಾಡಿದ್ದಾರೆ.

ಬನ್ನೂರಿನಲ್ಲಿ ನಡೆದ ಮದುವೆ ಪ್ರಸಂಗವೂ ಪ್ರಮುಖ ಘಟನೆಯಾಗಿ ಕಂಡುಬರುತ್ತದೆ. ಎರಡು ಕೋಮಿನ ಜಾತಿಗಳಲ್ಲಿ ವೈಷಮ್ಯದ ಛಾಯೆಯನ್ನು ತೋರಿಸಿದ್ದಾರೆ. ಅಧಿಕಾರಿಗಳಾಗಿ ಇವರ ಕರ್ತವ್ಯವೂ

ನಿಷ್ಠುರರಾಗಿಯೇ ಮಾಡಬೇಕಾಗಿರುತ್ತದೆ. ಮದುವೆ ಮೆರವಣಿಗೆಯೂ ಎಲ್ಲಾರ ವಿರೋಧದಿಂದಲೇ ನಡೆಸಬೇಕಾಗುತ್ತದೆ. ಒಕ್ಕಲಿಗರ ಪ್ರಭಾವ ಹೆಚ್ಚಾಗಿದ್ದರಿಂದ ಅವರಿಂದ ವಿರೋಧ ವ್ಯಕ್ತವಾಗುತ್ತದೆ. ರಾಮರಾವ್‌ರವರೇ ಮೆರವಣಿಗೆಯಲ್ಲಿ ಪ್ರಮುಖ ಆಕರ್ಷಣೆಯಾಗುತ್ತಾರೆ. ಆ ಕಾಲದಲ್ಲಿದ್ದ ಜಾತಿವೈಷಮ್ಯಗಳು ಎದ್ದು ಕಾಣುವಂತಿವೆ. ಬನ್ನೂರಿನ ಮದುವೆ ಘಟನೆಯನ್ನು ಮೆರವಣಿಗೆ ವೈಭವ, ಪೊಲೀಸ್ ರಕ್ಷಣೆ, ಅಧಿಕಾರಿಗಳು, ಅಂಗರಕ್ಷಕರು ಹಾದು ಹೋಗುತ್ತಾರೆ. ಈ ಪ್ರಸಂಗದಲ್ಲಿ ರೈತ ಹುಡುಗನೊಬ್ಬ ನೋಡಿದ "ಸುಬೇದಾರದೇ ಮೆರವಣಿಗೆ ಕಣಾ, ಅವರೇ ಮದುವಣಿಗ" ಎಂದು ಹಾಸ್ಯ ಚಟಾಕಿಯನ್ನು ಮುಜುಗರದ ಜೊತೆಗೆ ನಗುವಿನಿಂದಲೇ ಸ್ವಿಕರಿಸಿದರು. ಜಮೀನ್ದಾರರ ಮದುವೆ ಮೆರವಣಿಗೆಯನ್ನು ವಿರೋಧಿಸುವುದರ ಹಿಂದೆ ಜಮೀನ್ದಾರರ ವಿರುದ್ಧ ಇರುವುದು ತಿಳಿದುಬರುತ್ತದೆ. ಹಿಂದಿನಿಂದಲೂ ಊಳಿಗಮಾನ್ಯ ಪದ್ಧತಿಯ ದಬ್ಬಾಳಿಕೆ ಗ್ರಾಮದಲ್ಲಿ ಬೇರೂರಿದ್ದು ಕಾಣುತ್ತೇವೆ. ಸಾಮಾನ್ಯ ಜನರು ಜಮೀನ್ದಾರಿಕೆಯ ವಿರುದ್ಧ ಧ್ವನಿ ಎತ್ತುವುದು ಅಷ್ಟು ಸುಲಭದ ಮಾತಾಗಿರಲಿಲ್ಲ, ಅಥವಾ ಜಾತಿ ವೈಷಮ್ಯವೇ ಕಾರಣವಾಗಿರುತ್ತದೆ.

ಮೈಸೂರಿನ ನರಸೀಪುರ ದರೋಡೆಕಾರರ ರಂಗಭೂಮಿ ಎಂಬ ಹೆಸರಿತ್ತು. ಮೈಸೂರಿನ ರಸ್ತೆಯಲ್ಲಿ ದರೋಡೆಕಾರ ಕಳ್ಳತನಗಳು ಹೆಚ್ಚಾಗಿದ್ದವು. ರಾಮರಾವ್‌ರು ಗಾಡಿಗಳನ್ನು ಮುಂದೆಬಿಟ್ಟು ಹಿಂದೆ ಪೊಲೀಸರೊಂದಿಗೆ ಹಿಂಬಾಲಿಸಿ ಕಾದು ಕುಳಿತರು ಬಂದೂಕಿನಿಂದ ಗುಂಡುಹಾರಿಸಿದಾಗ ಕಳ್ಳರೆಲ್ಲಾ ಹೊಡಿಹೋದರು. ಮತ್ತೊಂದು ವಂಚಕನು ಚಿನ್ನವನ್ನು ಮಾಡುತ್ತಾನೆ, ಹಣವನ್ನು ಬಡವರಿಗೆ ದಾನಮಾಡತ್ತಾನೆ ಎಂಬ ಸುಳಿವು ಇರುತ್ತದೆ. ಆಧುನಿಕತೆಯಲ್ಲಿ ಸನ್ಯಾಸಿಯನ್ನು ನಂಬುವ ಮಾತು ದೂರವಾದದ್ದು, ರಾಮರಾವ್‌ರು ಯೋಗೀಶ್ವರನ ಚಟುವಟಿಕೆಗಳ ಮೇಲೆ ಕಣ್ಣಿಟ್ಟಿರುತ್ತಾನೆ. ಇವನು ನಯವಂಚಕನಂತೆ ಇರುತ್ತಾನೆ. ಖೋಟಾ ನೋಟಗಳ ದಂಧೆಯನ್ನು ಮಾಡುತ್ತಿರುತ್ತಾನೆ, ಲೇಖಕರು ಯೋಗಿಶ್ವರನ ಘಟನೆಯನ್ನು ಸ್ವಾರಸ್ಯಪೂರ್ಣವಾಗಿ ರಚಿಸಿದ್ದಾರೆ. ಜನರ ಮೌಢ್ಯತೆ ಇರುವರೆಗೂ ನಯಗಾರಿಕೆಯ ಕಳ್ಳತನಗಳು ನಡೆಯುತ್ತಿರುತ್ತೇವೆ. ಅಮಲ್ದಾರ ಜಾಣ್ಮೆಯು ಘಟನೆಯನ್ನು ಸ್ವಾರಸ್ಯ ಪೂರ್ಣವಾಗಿಸಿದ್ದಾರೆ.

ಶ್ರೀರಂಗಪಟ್ಟಣದ ಕೋಟೆಯ ಇತಿಹಾಸವನ್ನು ಕೃತಿಯಲ್ಲಿ ಕಟ್ಟಿಕೊಡುತ್ತಾರೆ. ಲೇಖಕರಿಗೆ ಟಿಪ್ಪುಸುಲ್ತಾನ್ ಎಂದರೆ ವಿಶ್ವಾಸವು ಇಮ್ಮುಡಿಯಾಗುತ್ತಿತ್ತು. ಕೋಟೆಯನ್ನು ನೋಡಿದಾಗ ಟಿಪ್ಪುವಿಗೆ ಆದಾ ದ್ರೋಹ, ದಾಳಿ, ನಾಶವೂ ಕಣ್ಣೆದೆ ಕಟ್ಟುವಂತೆ ಭಾಸವಾಗುತ್ತದೆ ಎನ್ನುತ್ತಾರೆ. ಮೈಸೂರಿನಲ್ಲಿ ಯಾವ ಮುಸ್ಮಾಲನನ್ನು ನೋಡಿದರೂ ಇವರ ಟಿಪ್ಪುವಿನ ಸರ್ಧಾರನೋ, ಸಿಪಾಯಿಯೋ ಇದ್ದಿರಬಹುದೆಂದು ರಾಮರಾವ್‌ರ ಮನಸ್ಸಿಗೆ ಬರುತ್ತಿತ್ತು. ಅವರ ಮನಸ್ಸಿನಲ್ಲಿ ತೋರುತಿದ್ದ ಪ್ರೀತಿ ವಿಶ್ವಾಸಗಳನ್ನು ಗುರುತಿಸುವಂತೆ ಮಾಡುತ್ತದೆ. ಟಿಪ್ಪು ಅವರ ಮೆಚ್ಚಿನ ದೀರನೆ ಟಿಪ್ಪುವಿನ ಹಿನ್ನೆಲೆಯನ್ನು ಗುರುತಿಸಿ ಇತಿಹಾಸವನ್ನು ನೆನಪಿಸುವಂತೆ ಮಾಡುತ್ತಾರೆ.

**ಸುಧಾರಣೆಗಳು**

ನವರತ್ನರಾಮರಾವ್‌ರು ಸುಬೇದಾರರಾಗಿ, ಅಮಲ್ದಾರರಾಗಿ, ಪ್ರೊಬೇಷನರಿಯಾಗಿ ತಮ್ಮ ಅಧಿಕಾರಾವಧಿಯನ್ನು ಕೇವಲ ನ್ಯಾಯ ತೀರ್ಮಾನಗಳಿಗೆ ಸೀಮಿತಗೊಳಿದವರಲ್ಲ. ಸಮಾಜದಲ್ಲಿನ ಅನೇಕ ಸುಧಾರಣೆಯ ಕೆಲಸಗಳಿಗೂ ಬದ್ಧವಾಗಿದ್ದರು. ಅವರ ಅಧಿಕಾರಾವಧಿಯಲ್ಲಿ ಅನೇಕ ಗುರುತರವಾದ ಕಾರ್ಯಗಳೂ ಇಂದಿಗೂ ಶಾಶ್ವತವಾಗಿರುವಂತೆ ಮಾಡಿದ್ದಾರೆ. ಅಂತಹ ಶಾಶ್ವತವಾದ ಮಹತ್‌ಕಾರ್ಯಗಳಲ್ಲಿ ಅವರಲ್ಲಿನ ಸಾಮಾರ್ಥ್ಯವನ್ನು ಸೂಚಿಸುತ್ತದೆ. ನರಸೀಪುರದಲ್ಲಿನ ಪಂಚಲಿಂಗೇಶ್ವರ ದೇವಸ್ಥಾನವನ್ನು ಸುಮಾರು ಎಂಟು ಸಾವಿರ ಜನರನ್ನು ಒಗ್ಗೂಡಿಸಿ ಮರುಳನ್ನು ತೆಗಿಸುವ ಕಾರ್ಯ ಯಶಸ್ವಿಯಾಗಿ ಮಾಡಿದ್ದು ಅಸಹಜದ ಮಾತು. ಇತಿಹಾಸದಲ್ಲಿ ಅರಮನೆಯನ್ನು ದೇವಾಲಯವನ್ನೋ ಕಟ್ಟುವಾಗಿನ ಕಾರ್ಯಗಳನ್ನು ನೆನಪಿಗೆ ತರುವಂತೆ ಕಂಡು ಬರುತ್ತದೆ. ಪಂಚಲಿಂಗೇಶ್ವರಗಳಿಂದ ವೈದ್ಯೇಶ್ವರ, ಮರುಳೇಶ್ವರ, ಪಾತಾಳೇಶ್ವರ, ವಿಜಯೇಶ್ವರ, ಮಲ್ಲಿಕಾರ್ಜುನೇಶ್ವರ ದೇವಾಲಯಗಳನ್ನು ಜೀರ್ಣೋದ್ಧಾರ ಮಾಡಿದ್ದಾರೆ.

ಪಂಚಲಿಂಗೇಶ್ವರ ದೇವಸ್ಥಾನಗಳ ಹಿನ್ನೆಲೆಯನ್ನು ಕೃತಿಯಲ್ಲಿ ತಿಳಿಸುತ್ತಾರೆ. ಮೈಸೂರು ಮಹಾರಾಜರ ವಂಶಪರಂಪರೆಯನ್ನು ಕಟ್ಟಿಕೊಟ್ಟಂತಿದೆ. "ತಲಕಾಡು ಮರಳಾಗಲಿ ಮಾಲಾಂಗಿ ಮಡುವಾಗಲಿ ಮೈಸೂರು ದೊರೆಗಳಿಗೆ ಮಕ್ಕಳಾಗದೆ ಹೋಗಲಿ" ಎಂಬ ಅಲವೆಲಮ್ಮನ ಶಾಪ ದೇವಸ್ಥಾನಗಳ ಮರಳಿನಿಂದ ಮರೆಯಾಗಿತ್ತು. ಕಾಂತರಾಜ ಅರಸಿ, ಮಹಾರಾಣಿಯವರು, ಮಹಾರಾಜರ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಕೃತಿಯಲ್ಲಿ ಈ ಪ್ರಸಂಗವು ಮೈಸೂರು ಸರ್ಕಾರದ ಇತಿಹಾಸವನ್ನೇ ಬಿಂಬಿಸುವಂತಿದೆ. ಆಧುನಿಕ ಕಾಲದಲ್ಲಿ ನಿಂತು ನೋಡುವ ಘಟನೆಗಳನ್ನು ಎರಡು ಕಾಲಗಳ ನಡುವಿನ ಭಿನ್ನತೆಗಳನ್ನು ಸೂಕ್ಷ್ಮವಾಗಿ ತೋರಿಸಿದಂತೆ ವ್ಯಕ್ತವಾಗುತ್ತದೆ.

ಹೊಳೆನರಸೀಪುರದ ಗ್ರಾಮವೊಂದರಲ್ಲಿ ಕುಡಿಯುವ ನೀರಿಗಾಗಿ ಬಾವಿತೊಡಿಸಿಕೊಟ್ಟಿದ್ದು, ಗ್ರಾಮದ ಹೆಂಗಸು ಅಮಲ್ದಾರರಾದ ರಾಮರಾವ್‌ರನ್ನು ನೆನೆಯುತ್ತಾಳೆ. ಈ ಪ್ರಸಂಗವೂ ಲೇಖಕರಲ್ಲಿ ಸಂತೋಷವನ್ನೇ ತರುತ್ತದೆ. ಆ ಗ್ರಾಮದ ಜನರು ಎರಡು ಮೂರು ಮೈಲಿ ದೂರಕ್ಕೆ ನೀರು ತರುವ ಸಂದರ್ಭವನ್ನು ಗಮನಿಸಿ ಭಾವಿತೋಡಿಸಿಕೊಟ್ಟಿರುತ್ತಾರೆ. ಕೃತಿಯನ್ನು ರಚಿಸುವಾಗ ಆಕೆಯ ಮಾತುಗಳಿಗೆ ಇದೇ ಅಲ್ಲವೇ ನೆನಪುಗಳ ಸ್ವಭಾವ ಎಂದು ತಿಳಿಸುತ್ತಾರೆ. ಕೃತಿಯಲ್ಲಿ ಲೇಖಕರ ದೃಷ್ಟಿಕೋನವೂ ಒಂದೇ ರೀತಿಯಾಗಿಲ್ಲ ಘಟನೆಗಳ ಜೊತೆಯಲ್ಲಿಯೇ ಗ್ರಾಮಗಳಲ್ಲಿನ ಸಾಮಾಜಿಕ ಸ್ಥಿತಿಗತಿಗಳನ್ನೇ ಬಿಂಬಿಸುತ್ತಾರೆ.

ಮೈಸೂರಿನ ಹಲವು ಭಾಗಗಳಲ್ಲಿ ಕಾರ್ಯನಿರ್ವಹಿಸಿದ್ದ ಲೇಖಕರು ಅನೇಕ ಕೆಲಸಗಳಲ್ಲಿ ಯಶಸ್ವಿಯಾದವರು. ಇವರ ಆಶಾದಾಯಕ ಬದುಕು ಮೈಸೂರಿನ ತುಂಬಾ ಬಹಳ ಖ್ಯಾತಿಯನ್ನು ಪಡೆದಿತ್ತು. ಗ್ರಾಮೀಣ ಜನರಿಗೆ ಸೌಕರ್ಯಗಳನ್ನು ಒದಗಿಸಿ ಜನರಿಂದ ಪ್ರಶಂಸೆಗೆ ಪಾತ್ರರಾಗಿದ್ದರು.

ಕಪಿಲೆಹರಿಯುವ ತಿರುಮಕೂಡ್ಲಿನ ಹತ್ತಿರ ಎರಡು ಸೇತುವೆಗಳನ್ನು ನಿರ್ಮಿಸಿದ್ದರು. ಮೂಗೂರು, ಚಾಮರಾಜನಗರ, ಕೊಳ್ಳೆಗಾಲ, ಸೋಸಲೆ, ಮಳವಳ್ಳಿ, ಬನ್ನೂರು, ಬೆಳಕವಾಡಿ, ಶಿವನಸಮುದ್ರ ಮುಂತಾದ ಕಡೆಗಳಲ್ಲಿ ಸೇತುವೆ ನಿರ್ಮಿಸಿ ಅಪಘಾತಗಳನ್ನು ತಪ್ಪಿಸಿದ್ದರು. ಸ್ವತಃ ರಾಮರಾಯರೇ ಹೊಳೆಯಲ್ಲಿ ಸಿಲುಕಿ ಅಪಾಯದಿಂದ ಪಾರಾಗಿದ್ದರು. ಇಂತಹ ಅನುಭವಗಳಿಂದ ಜನರನ್ನು ಮುಕ್ತರಾಗುವುದಕ್ಕೆ ಸೇತುವೆಗಳನ್ನು ನಿರ್ಮಿಸಿ ಗುರುತರವಾದ ಕಾರ್ಯಗಳನ್ನು ಮಾಡಿದ್ದಾರೆ.

ಆಧುನಿಕ ಕಾಲದ ಅಧಿಕಾರಿಯಂತೆ ನಿರ್ದಿಷ್ಟವಾದ ಕಾರ್ಯಗಳಿಗೆ ಸೀಮಿತವಾಗಿರಲಿಲ್ಲ. ತಾಲ್ಲೂಕಿನ ಪ್ರತಿಯೊಂದು ಘಟನೆಗಳಿಗೆ ಅಮಲ್ದಾರರೇ ಹೊಣೆ ಹೊರಬೇಕಾಯಿತ್ತು. ಕಾವೇರಿ ತೀರದ ಹನಸೋಣೆ, ಹೊಳೆಸಾಲಿ, ನಾಲಾಸಾಲಿನ ಗ್ರಾಮಗಳಲ್ಲಿ ಕಾಲಾರಾ ರೋಗದಿಂದ ತತ್ತರಿಸಿತ್ತು. ಪರಿಸ್ಥಿತಿಯನ್ನು ಅರಿತ ಅಮಲ್ದಾರರು ಹೊಳೆಯಲ್ಲಿ ಬಟ್ಟೆ ಹೊಗೆಯುವುದು. ಮುಸುರೆ ಹಾಕುವುದು. ತ್ಯಾಜ್ಯಗಳನ್ನು ಎಸೆಯುವುದು, ಸೊಂಕು ತಗಲದಂತೆ ಕಟ್ಟುನಿಟ್ಟು ಮಾಡಿದರು. ಕಾಲಾರಾ ನಿರ್ಮೂಲನೆಗಾಗಿ ಸೊಂಕು ಜಾಡ್ಯವನ್ನು ತಡೆಯಲು ಹಣಸಂಗ್ರಹಿಸಿದರು. ಜಿಲ್ಲಾಧಿಕಾರಿ ಮತ್ತು ಮೆಡಿಕಲ್ ಆಫಿಸರ್ ಸಹಾಯ ಯಾಚಿಸಿ ಹಣ ಸಂಗ್ರಹಿಸಿ "ಕ್ಲೋರೋಫಾರಂ ಮತ್ತು ಮಾರ್ಫಿಯಾ ಟಿನ್‌ಕ್ಚರ್" ಎಂಬ ಮಾತ್ರೆಗಳನ್ನು ಗ್ರಾಮಗಳಿಗೆ ಹಂಚಿಸಿ ಮಾಮೂಲಿ ಸ್ಥಿತಿಗೆ ತಂದರು. ಕೃತಿಯ ಆರಂಭದಲ್ಲಿ ನಿಷ್ಠುರರಾಗಿ, ದರ್ಪತನದವರಾಗಿ, ಧೈರ್ಯವಂತರಾಗಿ ಕಂಡು ಬರುವ ಲೇಖಕರು ಈ ಘಟನೆಯಲ್ಲಿ ಉದಾರ ಮನೋಭಾವವನ್ನು ತೋರುತ್ತಾರೆ. ಕರುಣೆಯನ್ನು ಗಿಟ್ಟಿಸುವಂತಹ ಈ ಘಟನೆಯು ಅವರನ್ನು ಬಹಳ ದಿನಗಳ ಕಾಲ ಕಾಡಿತ್ತು. ಈ ಕಾರಣದ ಪ್ರೇರಣೆಯಿಂದಲೋ ಏನೂ "ಹೆಣ್ಣಿನ ಹೃದಯ" ಕತೆಯಲ್ಲಿ ರೋಗದ ಭೀಕರತೆಯನ್ನು ಕಥಾವಸ್ತುವಾಗಿಸಿದ್ದಾರೆ.

ಮೈಸೂರು ಸರ್ಕಾರವು ಜಮೀನ್ದಾರಿ ಪದ್ಧತಿಯಿಂದ ಹೊರತಾಗಿಲ್ಲ. ಕಂದಾಯ ವಸೂಲಿಯಲ್ಲಿ ಅನೇಕ ಸುಧಾರಣೆಯನ್ನು ಮಾಡಿದ್ದರು. ಕೃಷಿ ಭೂಮಿಯ ಹಂಚಿಕೆಯಲ್ಲಿ ತಾರತಮ್ಯದ ಲೋಪ ಕಂಡುಬರುತ್ತಿದ್ದು, ರಾಮರಾವ್ ಅವರು ಸರ್ವೆಮಾಡುವಲ್ಲಿ ಮುಂದಾಗಿ ವಿಫಲವಾದರೂ, ಅಷ್ಟಕ್ಕೆ ಸುಮ್ಮನೇ ಕೂರದ ಅವರು ಹುಜೂರು ಜಮಾಬಂದಿ ಆಫೀಸರಾದ ಅಂಬಳೆ ಸುಬ್ರಮಣ್ಯ ಅಯ್ಯರ್‌ನವರಲ್ಲಿ ರೆವಿನ್ಯೂ ಕಾನೂನನ್ನು ತಿಳಿದುಕೊಂಡು ಚುಂಚನಕಟ್ಟೆ ಗ್ರಾಮದಲ್ಲಿ ಬಾಂದುಗಳ ಅಜಾಮಾಯಿಷಿಯನ್ನು ಸಲಿಸಾಗಿ ಏರ್ಪಡಿಸಿದರು. ಕಂದಾಯವನ್ನು ತಮ್ಮ ಅಧಿಕಾರದ ದಕ್ಷತೆಯಿಂದಲೇ ವಸೂಲು ಮಾಡಿದರು. ಸುವ್ಯವಸ್ಥಿತವಾದ ಈ ಕಾರ್ಯವು ಮೈಸೂರಿನ ಇತರ ಅಮಲ್ದಾರರಗಿಂತ ಭಿನ್ನವಾಗಿ ಕಾಣುತ್ತಿದ್ದರಿಂದ ಮೇಲಿನ ಅಧಿಕಾರಿಗಳು ಅವರ ದಕ್ಷತೆಯನ್ನು ಮೆಚ್ಚುತ್ತಿದ್ದರು.

'ಕೆಲವು ನೆನಪುಗಳು' ವ್ಯಕ್ತಿಯೊಬ್ಬನ ಆತ್ಮಕಥೆಯಾದರೂ, ವೈಯಕ್ತಿಕತೆಗೆ ಹೆಚ್ಚು ಒತ್ತು ಕೊಟ್ಟವರಲ್ಲಿ, ಸಮಾಜದಲ್ಲಿನ ನಾನಾ ಮುಖಗಳನ್ನು ತೆರೆದಿಡುತ್ತದೆ. ಮೈಸೂರು ಭಾಗದ ವೈವಿಧ್ಯತೆಯ

ದಾಖಲಿಸಿದ ಪುಸ್ತಕವಾಗಿದೆ. ಜಾತಿಗಳ ನಡುವಿನ ಭಿನ್ನತೆಗಳು, ಕ್ರೈಸ್ತ ಸನ್ಯಾಸಿಯೊಬ್ಬನ ಆಟೋಟೊಪತನ, ಬ್ರಿಟೀಷರ ಆಡಳಿತಗಾರರು, ಪೊಲೀಸ್‌ರ ಕಾರ್ಯನಿರ್ವಹಣೆ, ಸಂಗೀತ, ಸಾಹಿತ್ಯ, ಇತಿಹಾಸದ ಬಗ್ಗೆಯೂ ತಿಳಿಸುತ್ತಾ ಹೋಗುತ್ತಾರೆ. ಮೈಸೂರು ಪ್ರಾಂತ್ಯಗಳಾದ ಟಿ.ನರಸೀಪುರ, ನಂಜನಗೂಡು, ಚಾಮರಾಜನಗರ, ಯಳಂದೂರು, ಯಡತೊರೆ, ಕೊಳ್ಳೆಗಾಲ, ಅರಸೀಕೆರೆ, ಪ್ರದೇಶಗಳಲ್ಲಿನ ವಾತಾವರಣವನ್ನು ದಾಖಲಿಸಿದ್ದಾರೆ. ಲೇಖಕರ ಜೀವನ ವಿವರಗಳನ್ನು ತಿಳಿಯುವ ಜೊತೆಗೆ ತಮ್ಮ ಸುತ್ತಮುತ್ತಲಿನ ವಾತಾವರಣವನ್ನು ಪಾತ್ರಗಳ ವೈಶಿಷ್ಟ್ಯತೆಗಳು ಕೃತಿಯುದ್ದಕ್ಕೂ ಸ್ಥಾನ ಪಡೆದುಕೊಂಡು ಕೃತಿಯ ಮಹತ್ವವನ್ನು ಸಾರಿದಂತಿದೆ.

## ಪ್ರದಾನ ಪಾತ್ರಗಳ ಕುರಿತ ಚರ್ಚೆ

'ಕೆಲವು ನೆನಪುಗಳು' ಕೃತಿಯು ಆತ್ಮಕಥೆಯೆಂದೇ ಕರೆದರೂ ಆತ್ಮಕಥೆಯಾಗಿ ನಿಲ್ಲುವುದಿಲ್ಲ. ಕಾದಂಬರಿಗಳಲ್ಲಿ ಬರುವಂತಹ ಪಾತ್ರಗಳ ಹಾಗೇ ಲೇಖಕರ ಅನುಭವಕ್ಕೆ ಬಂದ ವ್ಯಕ್ತಿಗಳನ್ನೇ ಪ್ರಧಾನ ಪಾತ್ರದಂತೆ ಚಿತ್ರಿಸಿದ್ದಾರೆ. ಪಾತ್ರಗಳ ಚಿತ್ರಣವನ್ನು ಸಹಜವಾಗಿಯೇ ತೋರಿಸಿದ್ದು ಕೃತಿಯುದ್ದಕ್ಕೂ ಹಲವಾರು ಪಾತ್ರಗಳು ನಮ್ಮನ್ನು ಕಾಡುತ್ತ ಸಾಗುತ್ತೇವೆ. ಇಂತಹ ಪ್ರಸಂಗಗಳ ವಿವರಣೆಯಲ್ಲಿ ರಾಮರಾವ್ ಅವರೆ ಮಾರೆಯಾಗಿರುವ ಉದಾಹರಣೆಗಳು ಸಿಗುತ್ತೇವೆ. ಬ್ರಿಟೀಷ್ ವಿದ್ವಾಂಸರಾದ ಟೇಟ್ ಸಾಹೇಬರು. ಸ್ಪರ್ಕ್‌ಸಾಹೇಬರು, ದೊಡ್ಡ ಅರಸೇಗೌಡ, ತಂದ್ರೇಲಿಂಗ, ಜಯಚಾಮರಾಜೇಂದ್ರ ಒಡೆಯರ್, ಮಹಾರಾಣಿ, ವೀಣೆ ಶೇಷಣ್ಣನವರು, ದೊಡ್ಡಹೈದ, ವೆಂಕಟೇಶ ಅಯ್ಯಂಗಾರ್, ದಿವಾನ್ ಕೃಷ್ಣಮೂರ್ತಿ, ವಿಶ್ವೇಶ್ವರಯ್ಯ, ಬೆಳವಾಡಿ ದಾಸಪ್ಪನವರು, ಶೇಷಾದ್ರಿ ಅಯ್ಯರ್, ಕಾಂತಾರಾಜೆ ಅರಸಿ, ದೇವರಸೇಗೌಡ, ಮಾಧವರಾಯರು, ಗುರುಕಾರರು ಜಮಾಬಂದಿ ಆಫೀಸರಾದ ಅಂಬಳೆ ಸುಬ್ರಹ್ಮಣ್ಯ ಅಯ್ಯರು ಮುಂತಾದ ಪಾತ್ರಗಳು ಕೃತಿಯಲ್ಲಿ ಪ್ರಧಾನವಾಗಿ ಕಂಡು ಬರುತ್ತಾರೆ.

ಕೃತಿಯನ್ನು ಓದಿ ಮುಗಿಸುವ ಹೊತ್ತಿಗೆ ರಾಮರಾವ್‌ರ ವ್ಯಕ್ತಿತ್ವವು ಕನ್ನಡಿಯಂತೆ ಗೋಚರವಾಗುತ್ತದೆ. ಕೃತಿಯಲ್ಲಿನ ಪಾತ್ರಗಳು ಲೇಖಕರಿಗೆ ಇಳಿವಯಸ್ಸಿನಲ್ಲಿ ಪ್ರಭಾವ ಬಿರಿದ್ದಾರೆ. ಆ ವ್ಯಕ್ತಿಗಳನ್ನು ಕೃತಿಯಲ್ಲಿ ಹಿಡಿದಿಟ್ಟು ಆತ್ಮಕಥೆಯನ್ನು ಮತ್ತೊಂದು ದಿಕ್ಕಿನಲ್ಲಿ ಕೊಂಡೊಯ್ಯುತ್ತಾರೆ. ಅಧ್ಯಯನ ಉದ್ದೇಶಕ್ಕಾಗಿ ಪ್ರಧಾನವಾದ ಪಾತ್ರಗಳನ್ನು ಬಿಂಬಿಸುತ್ತಿದ್ದಾರೆ, ಕೃತಿಯಲ್ಲಿನ ಸಣ್ಣಪುಟ್ಟ ಪಾತ್ರಗಳಾದ ಬಳ್ಳಕ್ಕಿಸೀನ, ಪೊಟಲಾಯರಿ, ಕೆ.ಡಿ.ರಾಮಲಿಂಗ, ಯೋಗಿಶ್ವರ, ಪುಟ್ಟಸ್ವಾಮಿ, ಕೆಂಪನಂಜಮ್ಮ, ಗಿರಿಜಮ್ಮ ಮುಂತಾದ ಪಾತ್ರಗಳು ಸಹ ಓದುಗರ ಮನಸ್ಸಲ್ಲಿ ನೆಲೆಯೂರುತ್ತೇವೆ. ಪ್ರಧಾನ ಪಾತ್ರಗಳಷ್ಟೇ ಕುತೂಹಲಕಾರಿಯಾಗಿವೆ. ಲೇಖಕರು ವೈಯಕ್ತಿಕ ಬದುಕಿನ ಸ್ವಾರಸ್ಯವನ್ನು ಹೇಳಿಕೊಂಡಿಲ್ಲ, ಅವರ ಯಾತ್ರೆಯ ಸಹಚರರನ್ನು ಕೃತಿಯಲ್ಲಿ ಹಾದುಹೋಗುವಂತಿವೆ ಮತ್ತು ಅವರ ಅಂತರಂಗವನ್ನು ತಿಳಿಸುವ ಮನೋಭಾವರಾಗಿದ್ದಾರೆ. ಎಲ್ಲಾ ವರ್ಗದ ಜನರನ್ನು ತನ್ನ ಕೃತಿಯಲ್ಲಿ ಬಳಸಿಕೊಂಡು ಆ ಮೂಲಕ ವ್ಯಕ್ತಿತ್ವವನ್ನು ಬಿಂಬಿಸಿಕೊಂಡಿದ್ದಾರೆ.

ನವರತ್ನ ರಾಮರಾವ್‌ರು ಕಾಲೇಜ್ ದಿನಗಳಲ್ಲಿ ಬ್ರಿಟೀಷ್ ವಿದ್ವಾಂಸರಾದ ಟೆಟ್‌ಸಾಹೇಬರೇ ಅಚ್ಚುಮೆಚ್ಚಿನ ಗುರುಗಳಾಗಿದ್ದರು. ವಸಾಹತುಶಾಹಿ ಆಡಳಿತವನ್ನೇ ವಿರೋಧಿಸುತ್ತಿದ್ದ ರಾಮರಾವ್‌ರು ಟೆಟ್‌ರ ಬಗ್ಗೆ ಮೃದು ಧೋರಣೆಯೇ ತಾಳಿದ್ದರು. ಗುರುಗಳಾದ ಟೆಟ್‌ರು ಅವರನ್ನು ಬಹಳ ಪ್ರೀತಿಯಿಂದಲೇ ಕಾಣುತ್ತಿದ್ದರು. ಅವರ ವಿದ್ಯಾಭ್ಯಾಸಕ್ಕೂ ಸಹಾಯಮಾಡಿದ್ದರು. ಮಾಸ್ತಿಯವರ ಮುಂದೇ ಟೆಟ್ ಸಾಹೇಬರು ನನಗೆ ದೇವರ ಸಮಾನ ಎಂದು ಹೇಳಿಕೊಂಡಿದ್ದಾರೆ. ಲೇಖಕರ ಕೊನೆಯ ಜೀವನದವರೆಗೂ ಆಪ್ತರಾಗಿಯೇ ಇದ್ದರು. ಇಂಗ್ಲೀಷ್ ಮತ್ತು ಕನ್ನಡ ಸಾಹಿತ್ಯದಲ್ಲಿ ತೊಡಗಿಕೊಂಡಾಗಲೂ ಪ್ರೋತ್ಸಾಹವನ್ನು ನೀಡಿದ್ದರು. ಬ್ರಿಟೀಷರ ವಿಚಾರ ಬಂದಾಗ ರಾಕ್ಷಸರೆಂದೇ ಕರೆಯುತ್ತಿದ್ದ ರಾಮರಾವ್‌ರು ಟೇಟ್‌ರ ವಿಚಾರದಲ್ಲಿ ಗೌರವಾತ್ಮಕವಾಗಿ ನಡೆದುಕೊಳ್ಳುತ್ತಿದ್ದರು. ದೇಶಿಯತೆಯನ್ನು ಎತ್ತಿಹಿಡಿಯುವ ನಾಯಕರೊಬ್ಬರು ತೋರಿದ ಮನೋಭಾವವೇ ಭಿನ್ನವಾಗಿದೆ. ವ್ಯಕ್ತಿಯ ವ್ಯಕ್ತಿತ್ವಕ್ಕೆ ಬೆಲೆ ಕೊಡುವ ಟೆಟ್ ಮತ್ತು ರಾಮರಾವರ ಸ್ನೇಹ ಆ ಕಾಲಕ್ಕೆ ನಿಜಕ್ಕೂ ಆದರ್ಶನೀಯವಾಗಿದೆ.

ರಾಮರಾವ್‌ರ ನೆನಪುಗಳಲ್ಲಿ ದೇವರಸೇಗೌಡನು ಪ್ರಧಾನ ಪಾತ್ರವಾಗಿಯೇ ಉಳಿಯುತ್ತಾರೆ. ಲೇಖಕರು ಮತ್ತು ದೇವರಸೇಗೌನರ ನಡುವೆ ದೊಡ್ಡ ವಾಗ್ವಾದವೇ ಕಾಣುತ್ತದೆ. ಇವರ ವಿಚಾರದಲ್ಲಿ ಲೇಖಕರಿಗೆ ದೂರುಗಳೇ ಬಂದಿರುತ್ತೇವೆ. ದೇವರಸೇಗೌಡರ ಗೂಂಡಾ ಸೈನ್ಯ. ದಬ್ಬಾಳಿಕೆಯಿಂದಾಗಿ ಆ ಭಾಗದ ಸರ್ಕಾರವೇ ಆಗಿದ್ದಾರೆ. ಹಲವಾರು ಪ್ರಕರಣಗಳು ಗೌಡರ ಮೇಲೆಯಿದ್ದು ಮಹಾದರ್ಪಿಷ್ಟನಂತೆ ಕಂಡು ಬರುತ್ತಿದ್ದ. ವಸಾಹತುಕಾಲದಲ್ಲಿ ಸ್ಥಳೀಯವಾಗಿ ಅರಾಜಕತೆ ಉಂಟಾಗಿದ್ದು ಸತ್ಯವಾಗಿದೆ. ಇಂತಹ ಪ್ರಸಂಗವನ್ನು ದೇವರಸೆಗೌಡನು ಬಳಕೆಮಾಡಿಕೊಳ್ಳುತ್ತಾನೆ. ಇವನ ಮೇಲೆ ಬಂದಿದ್ದ ದೂರುಗಳಿಂದ ಅಮಲ್ದಾರರು, "ದೇವರಸೇಗೌಡನಿಗೂ, ಅವನಂತೆ ಇತರರಿಗೂ ತೋರಿಸಬೇಕೆಂಬ ಸಂಕಲ್ಪ" ಮಾಡಿದ್ದಾರೆ. ಪೋಲಿಸಾಂಬನ ಪ್ರಕರಣದಲ್ಲಿ ದೇವರಸೇಗೌಡನ ಮನೆಗೆ ನುಗ್ಗಿದ್ದಾಗ ಅವರ ಕರುಣಾ ಜನಕ ಪರಿಸ್ಥಿತಿಯು ಲೇಖಕರಿಗೆ ಅವನಲ್ಲಿದ್ದ ಹಗೆಯೂ ಮರೆಯಾಗುತ್ತದೆ. ರಾಮರಾವ್‌ರು ಯಡತೊರೆಯನ್ನು ಬಿಡುವಾಗ ಬಿಳ್ಕೋಡುಗೆಗೆ ಬಂದದ್ದು ನೆನಪಿಸಿಕೊಂಡಿದ್ದಾರೆ. ದುಷ್ಟತನದ ವ್ಯಕ್ತಿತ್ವವು ರಾಮರಾವ್‌ರಲ್ಲಿ ಬೆರತು. ನೆಲೆಯೂರಿದ್ದೆ ವಿಶೇಷವಾಗಿದೆ. ಲೇಖಕರ ದೃಷ್ಟಿಕೋನಗಳೇ ಭಿನ್ನವಾದವುಗಳು ಆ ಕಾರಣದಿಂದಲೇ ದರ್ಪದ ವ್ಯಕ್ತಿಯು ಅವರಿಗೆ ಆಪ್ತರಾಗಿರುವಂತೆ ಸ್ಥಾನವನ್ನು ಕಲ್ಪಿಸಿದ್ದಾರೆ.

ಹೊಳೆನರಸೀಪುರದಲ್ಲಿ ಕೊಲೆ ಮತ್ತು ದೊಂಬಿ ಕೇಸಿನ ವಿಚಾರಣೆಯು ಅಮಲ್ದಾರರು ಟೀಕೆಗಳನ್ನು ಎದುರಿಸಬೇಕಾಯಿತು. ಜಡ್ಜ್‌ಮೆಂಟಿನಲ್ಲಿ ಮೇಧಾವಿಗಳೂ, ಶಕ್ತರೂ ಆದ ರಾಮರಾವ್‌ರು ಯೌವ್ವನದ ಅಲೌಕಿಕ ರಭಸದಿಂದ ದುಡುತಿದ್ದಾರೆ. ಎಂದು ತಿಳಿಸಿದ್ದರು. ಲೇಖಕರು ಪ್ರಾಮಾಣೀಕರಾದರೂ ಈ ವಿಚಾರಣೆಯಲ್ಲಿ ದುಡುಕಿದಂತೆ ಕಾಣುತ್ತದೆ. ತೀರ್ಮಾನ ವಿವರಣೆಯನ್ನು ಮೇಲಾಧಿಕಾರಿಗೆ ನೀಡುವಲ್ಲಿ ಜಾಣ್ಮೆಯನ್ನೇ ಮೆರೆದಿದ್ದಾರೆ. ೧. "ಯೌವ್ವನ ಉಂಟು ಆದರೆ ನನ್ನ ಜವಾಬ್ದಾರಿಯಲ್ಲ. ೨.ಬುದ್ಧಿ,

ಶಕ್ತಿ ಇವುಗಳಿದ್ದರೆ ದೇವರ ಕೃಪೆ: ಇವೆ ಎಂಬ ಆಪಾದನೆಗೆ ನನ್ನ ಕೃತಜ್ಞತೆಯೇ ಹೊರತು ಉದಾಹರಣೆಯಲ್ಲ, ೩. ರಭಸ, ದುಡುಕು, ಘನವುಳ್ಳ ಜಡ್ಜಿನವರು ನಾನು ಈ ಕೇಸಿನಲ್ಲಿ ಪ್ರವರ್ತಿಸಿದ ಮೇಲೆ ಇದರ ತನಿಖೆ ಪ್ರಾರಂಭವಾಯಿತೆಂದು ಟೀಕಿಸಿದ್ದು. ತಪ್ಪಿದ್ದರೆ ಕ್ಷಮಿಸಬೇಕು." ಎಂಬ ವಿವರಣೆಯು ಹಲವರಲ್ಲಿ ಹುಬ್ಬೇರಿಸುವಂತೆ ಮಾಡಿತ್ತು. ಆತ್ಮವಿಶ್ವಾಸಿಯೊಬ್ಬನು ಆಡಿದ ಮಾತುಗಳು ಸಹಜವಾಗಿಯೇ ಶಬ್ಬಾಸ್ ಗಿರಿಯನ್ನು ತೆಗೆದುಕೊಂಡಿದ್ದಾರೆ. ಓದುಗರಲ್ಲೂ ಅವರ ವಿವರಣೆಯೂ ಮೆಚ್ಚುಗೆ ಗಳಿಸುವಂತಿವೆ.

ರಾಮರಾವ್ ಅವರು ಹಲವಾರು ಘಟನೆಗಳಲ್ಲಿ ವೈಭವೀಕರಿಸಿಕೊಂಡರು ಹಲವಾರು ಪ್ರಸಂಗಗಳಲ್ಲಿ ಸೂತ್ರದಾರರಂತೆ ಕಾಣುತ್ತಾರೆ. ತಮ್ಮನ್ನೇ ಬಿಂಬಿಸಿಕೊಂಡು ಹೋದವರಲ್ಲ. ಸ್ವತಃ ಅವರೇ ವಿಮರ್ಶಿಸಿಕೊಂಡಿರುವುದು ಅವರ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಯಾಗಿದೆ. ರಾಮರಾವ್‌ರು ಎಷ್ಟೇ ಪ್ರಾಮಾಣೀಕರಾಗಿದ್ದರೂ ಅಪವಾದಗಳೂ ಕೇಳಿ ಬರುತ್ತಿದ್ದು ನಿಸ್ಸಂಕೋಚವಾಗಿಯೇ ದಾಖಲಿಸಿದ್ದಾರೆ. ನಾನು ನಿಸ್ಪೃಹ ಕೋಪಿಷ್ಟ, ದಾಕ್ಷಿಣ್ಯಕ್ಕೆ ಒಳಪಡುವವನಲ್ಲ, ಹಠವಾದಿ, ಧೈರ್ಯಶಾಲಿ, ಕ್ರೂರ, ಸ್ತೋತ್ರಪ್ರಿಯ, ಜಿಲ್ಲಾಧಿಕಾರಿಗಳ ನೆಚ್ಚಿನ ಅಮಲ್ದಾರ, ನನಗೆ ಸರ್ಕಾರದ ಬೆಂಬಲವಿದೆ. ಅಹಂಕಾರಿ, ಸರ್ವಜ್ಞಮಾನಿ, ವಗೈರಾ, ವಗೈರ, ಗುಣಗಳ ಕೀರ್ತಿ, ಇರುವುದೆಂದು ಹೇಳಿಕೊಂಡಿದ್ದಾರೆ. ಎಷ್ಟೇ ಪ್ರಾಮಾಣೀಕರಾದರೂ ಟೀಕೆಗಳೂ ಸಾಮಾನ್ಯವಾಗಿರುತ್ತದೆ ಇಂತಹ ಟೀಕೆಗಳಿಂದ ರಾಷ್ಟ್ರನಾಯಕರು ಹೊರತಾಗಿರಲಿಲ್ಲದೆ. ಆತ್ಮಕಥೆಗಳಲ್ಲಿ ಭಿನ್ನವಾದ ಘಟನೆಗಳನ್ನು ಹೇಳುವ ಮೂಲಕ ತಮ್ಮ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿದ್ದಾರೆ.

ಶ್ರೀ ರಾಜಗೋಪಾಲಚಾರ್ಯರು (ರಾಜಾಜಿ) ಸ್ವಾತಂತ್ರ್ಯ ಚಳುವಳಿಯ ಪ್ರಮುಖನಾಯಕರಲ್ಲಿ ಒಬ್ಬರಾಗಿದ್ದಾರೆ. ರಾಮರಾವ್ ಅವರ ಆಪ್ತ ಸ್ನೇಹಿತರಾಗಿದ್ದರು. ಇವರಿಬ್ಬರ ಚಿಂತನೆಗಳು ಒಂದಾಗಿದ್ದರೂ ಕಾರ್ಯಚಟುವಟಿಕೆ ಮಾತ್ರ ಭಿನ್ನವಾಗಿದ್ದವು. ಬ್ರಿಟೀಷರ ವಿರುದ್ಧ ಕಾಂಗ್ರೇಸ್ ಪಕ್ಷದಲ್ಲಿ ಗುರುತಿಸಿಕೊಂಡು ಹೋರಾಟ ಮಾಡುತ್ತಿದ್ದರು. ರಾಮರಾವ್‌ರು ಬ್ರಿಟೀಷರ ಆಡಳಿತಕ್ಕೆ ಒಳಪಟ್ಟ ಮೈಸೂರು ಸಂಸ್ಥಾನದಲ್ಲಿ ಕಾರ್ಯನಿರ್ವಹಿಸುತ್ತಿದ್ದರು. ಲೇಖಕರು ವಸಾಹತುಶಾಹಿಯನ್ನು ವಿರೋಧಿಸುತ್ತಿದ್ದವರಾಗಿದ್ದಾರೆ. ಎರಡು ಆಪ್ತ ಜೀವಗಳ ಚಿಂತನೆಗಳು ರಾಷ್ಟ್ರೀಯವಾದವನ್ನು ಗುರುತಿಸುವಂತಿದೆ. ಲೇಖಕರು ಜೀವಿತಾವಧಿಯ ಕೊನೆಯ ಕಾಲದವರೆಗೂ ಅನೂನ್ಯವಾಗಿ ಕಂಡು ಬರುತ್ತಾರೆ. ತಮ್ಮ ಅಧಿಕಾರಾವಧಿಯಲ್ಲಿ ಅನುಭವಕ್ಕೆ ಬಂದ ಸಣ್ಣಪುಟ್ಟ ಪಾತ್ರಗಳೇ ಕೃತಿಯಲ್ಲಿ ಸ್ಥಾನ ಕಲ್ಪಿಸಿಕೊಂಡಾಗ, ಆಪ್ತಮಿತ್ರರಾದ ರಾಜಾಜಿಯವರ ಸ್ನೇಹಕ್ಕೆ ಕೊಟ್ಟಂತಹ ಸ್ಥಾನಮಾನಗಳನ್ನು ಊಹಿಸಬಹುದಾಗಿದೆ.

ಮೈಸೂರು ಸಂಸ್ಥಾನದಲ್ಲಿ ದಿವಾನರ ಆಡಳಿತ ಪ್ರಭಾವ ಹೆಚ್ಚಾಗಿತ್ತು ಆಡಳಿತ ಯಂತ್ರ ದಿವಾನರಲ್ಲಿತ್ತು. ಸರ್ ಮಿರ್ಜಾಇಸ್ಮಾಯಿಲ್‌ರ ಜೊತೆಗೂಡಿ ೧೯೩೦ರಲ್ಲಿ 'ರೌಂಡ್ ಟೇಬಲ್ ಕಾನ್ಫರೇನ್ಸ್'ಗೆ ಲಂಡನ್‌ಗೆ ಹೋದರು. ಇದು ರಾಮರಾವ್‌ರಲ್ಲಿನ ವಿದ್ವತ್ತಿಗೆ ಸಾಕ್ಷಿಯಾಗಿದೆ. ದಿವಾನ್

ಶೇಷಾದ್ರಿ ಅಯ್ಯರ್, ದಿವಾನ್ ಕೃಷ್ಣಮೂರ್ತಿ, ದಿವಾನ್ ಮಾಧವರಾಯರ ಜೊತೆಗೂ ಒಡನಾಟವಿದ್ದು ಎಲ್ಲಾರಿಂದಲೂ ತಮ್ಮ ದಕ್ಷತೆಗಾಗಿ ಪ್ರಶಂಸೆ ಪಡೆದುಕೊಂಡಿದ್ದಾರೆ, ದಿವಾನ್‌ರಲ್ಲಿದ್ದ ಮೈಮನಸ್ಸನ್ನು ಕೃತಿಯಲ್ಲಿ ಹಿಡಿದಿಟ್ಟಿದ್ದು, ಆ ಕಾಲದ ದಿವಾನರ ವ್ಯಕ್ತಿತ್ವ ಮತ್ತು ಅವರ ಆಡಳಿತದ ಕಾರ್ಯವನ್ನು ಪರಿಚಯಿಸುತ್ತಾರೆ. ಕೃತಿಯುದ್ದಕ್ಕೂ ದಿವಾನ್‌ರು ಪ್ರಮುಖ ಪಾತ್ರವಾಗಿ ಉಳಿಯುತ್ತಾರೆ.

ಸಾಂಸ್ಕೃತಿಕ ನಗರಕ್ಕೆ ಹೆಸರುವಾಸಿಯಾದ ಮೈಸೂರು ಹಿಂದಿನಿಂದಲೂ ಪ್ರಸಿದ್ಧಿಯನ್ನೇ ಪಡೆದಿದೆ. ಸಂಗೀತ ಕ್ಷೇತ್ರದಲ್ಲೂ ಬಹುದೊಡ್ಡದಾದ ಪಟ್ಟಿಯನ್ನೆ ನೀಡುತ್ತದೆ. ರಾಮರಾವ್‌ರ ಕಾಲಕ್ಕೆ ಸಂಗೀತ ಕ್ಷೇತ್ರದಲ್ಲಿ ದೊಡ್ಡ ಕೊಡುಗೆ ನೀಡಿದ್ದ ವಿದ್ವಾಂಸರಲ್ಲಿ ಮಳವಳ್ಳಿ ಸುಬ್ಬಣ್ಣ, ವೀಣೆ ಶೇಷಣ್ಣ, ದ್ವಾರಂ ವೆಂಕಟಸ್ವಾಮಿ ನಾಯುಡು, ಪಿಟೀಲು ಚೌಡಯ್ಯ, ಶ್ರೀವಾಸುದೇವಾಚಾರ್ಯರು ಮುಂತಾದವರಾಗಿದ್ದಾರೆ. ಸಂಗೀತ ಕ್ಷೇತ್ರಕ್ಕೆ ನೀಡಿದ್ದ ಆಸಕ್ತಿ, ತಾರುಣ್ಯ ದಿನಗಳಲ್ಲಿ ಸಾಧಿಸಲಾಗದ ಕೊರತೆಯು ಒತ್ತಾಸೆಯಾಗಿಯೇ ಉಳಿದಿರುತ್ತದೆ. ಅಧಿಕಾರ ಅವಧಿಯಲ್ಲಿ ಪಿಟೀಲು ಸುಬ್ಬಣ್ಣ ಎಂಬ ವಿದ್ವಾಂಸರ ಅನಾರೋಗ್ಯದಿಂದ ಅಲೆಮಾರಿಯಾಗಿದ್ದರು. ಅವರನ್ನು ಒತ್ತಾಯಪೂರ್ವಕವಾಗಿಯೇ ಮನೆಯಲ್ಲಿ ಆಶ್ರಯ ಕೊಟ್ಟು ಉಪಚಾರಮಾಡಿದ್ದರು. ಸಂಗೀತದ ಮೇಲಿದ್ದ ಅಪಾರ ಆಸಕ್ತಿ ಸಂಗೀತ ವಿದ್ವಾಂಸನ ಸೇವೆ ಮಾಡುವ ಮೂಲಕ ಸಮಾಧಾನ ಪಟ್ಟಂತೆ ಕಂಡು ಬರುತ್ತಾರೆ. ಸುಬ್ಬಣ್ಣನವರ ಕತೆಯನ್ನು ಮಾಸ್ತಿ ವೆಂಕಟೇಶ್ ಅಯ್ಯಂಗಾರ್‌ರಿಗೆ ಹೇಳಿದ್ದರಿಂದ ಸುಬ್ಬಣ್ಣ ಕೃತಿಯನ್ನು ಬರೆಯಲು ಸಾಧ್ಯವಾಗಿತ್ತು. ಈ ಮೂಲಕ ಸಾಹಿತ್ಯಕ್ಕೂ, ಸಂಗೀತಕ್ಕೂ ಸಣ್ಣದೊಂದು ಕೊಡುಗೆ ನೀಡಿದಂತಾಗಿತ್ತು.

ಜಿಲ್ಲಾಧಿಕಾರಿಯಾದ ಸ್ಪರ್ಕ್ ಸಾಹೇಬರು ಕೃತಿಯಲ್ಲಿ ಪ್ರಮುಖವಾಗಿ ಕಂಡುಬರುತ್ತಾರೆ. ಸ್ಪರ್ಕ್ ಸಾಹೇಬರು ಆಗಮನದಿಂದಾದ ಗೊಂದಲ ಲೇಖಕರ ಕ್ಷಮೆಯಾಚಿಸುವಂತೆ ಕೇಳಿಕೊಂಡಿದ್ದು, ಸ್ಪರ್ಕ್‌ರು ನಗುವಿನಿಂದಲೇ ಅವರನ್ನು ಸುಧಾರಿಸಿದ್ದು ಗಮನ ಸೆಳೆಯುತ್ತಾರೆ. ಸ್ಪರ್ಕ್‌ರು ಜಿಲ್ಲಾಧಿಕಾರಿಯ ಅಧಿಕಾರವು ಹಲವು ಪ್ರಸಂಗಗಳಲ್ಲಿ ಕಾಣುತ್ತೇವೆ ಗುರುಕಾರರ ವಿಚಾರಣೆ ವೇಳೆ ರಾಮರಾವ್‌ರನ್ನು ಕರೆಯಿಸಿ ಸ್ಪರ್ಕ್ ಸಾಹೇಬರು ಯಡೆತೊರೆ ಅರ್ಕೇಶ್ವರ ಸ್ವಾಮಿ ದೇವಾಲಯದಲ್ಲಿ ಹಿರಿಯರೊಬ್ಬರ ಹರಕೆಯ ಮಾತುಗಳನ್ನು ಕೇಳಿದ ಪ್ರಸಂಗದಲ್ಲಿಯೂ ಹಾದು ಹೋಗುತ್ತಾರೆ. ದೇವರಸೇಗೌಡನ ವಿಚಾರಣೆ, ಮತ್ತು ಕೊಲೆ ಪ್ರಸಂಗಗಳನ್ನು ಅವರ ದಕ್ಷತೆಗೆ ಮೆಚ್ಚಿಕೊಟ್ಟಿದ್ದು ಇಂತಹ ಪ್ರಸಂಗಗಳಲ್ಲಿ ಸ್ಪರ್ಕ್‌ರು ಮತ್ತೆ ಮತ್ತೆ ಓದುಗರ ನೆನಪಿಗೆ ಬರುತ್ತಾರೆ. ಪರಿಚಯವಾದ ಸಮಯದಲ್ಲಿ ಅನಗತ್ಯ ಮಾತಿನ ಅಸಮಾಧಾನವು ತರುತ್ತದೆ. ಕೃತಿಯಲ್ಲಿನ ಪರಿಚಯ ಗಮನಿಸಿದಾಗ ಅನಂತರ ಅವರಿಬ್ಬರ ನಡುವೆ ಸೌಹಾರ್ದಯುತ ಗೌರವವಿತ್ತು.

ಬಳ್ಳಕ್ಕಿ ಸೀನನ ಪಾತ್ರವೂ ಚಿಕ್ಕಾದಾಗಿದ್ದರೂ ಅವನ ಸಾಹಸವೇ ಗಮನ ಸೆಳೆಯುವಂತದ್ದು, ಒಂದು ಪಾತ್ರೆಯ ಅಕ್ಕಿಯ ಅನ್ನವನ್ನು ಒಬ್ಬನೇ ಪುಷ್ಕಳವಾಗಿ ಉಂಡು ತೇಗುತ್ತಿದ್ದನು. ಈ ಪ್ರಸಂಗವನ್ನು

ಚೆನ್ನಾಗಿ ಬರೆದಿದ್ದಾರೆ. ರಾಮರಾವ್‌ರು ಸಣ್ಣಪುಟ್ಟ ಪಾತ್ರಗಳನ್ನು ಚಿತ್ರಿಸಿದ್ದು ಅವುಗಳ ಸ್ವಾರಸ್ಯ ಕಡಿಮೆ ಎನಿಸಿದರೂ. ಕೃತಿಯ ಪ್ರಧಾನ ವಿಚಾರಗಳ ಸಾಲಿನಲ್ಲಿ ಸ್ಥಾನಕಲ್ಪಿಸಿಕೊಳ್ಳುತ್ತೇವೆ.

**ಹಿಂದಿನ ಸ್ವಾಗತಗಳ ಸಿದ್ಧತೆ ಮತ್ತು ವಾಸ್ತವದಲ್ಲಿನ ಭಿನ್ನತೆಗಳು**

ನವರತ್ನ ರಾಮರಾವ್ ಅವರು 'ಕೆಲವು ನೆನಪುಗಳು' ಕೃತಿಯನ್ನು ಸ್ವಾತಂತ್ರ್ಯ ನಂತರದಲ್ಲಿ ಬರೆದರಾದರೂ ಅದರ ಕಥಾವಸ್ತು ಸ್ವಾತಂತ್ರ್ಯ ಪೂರ್ವದ್ದು. ಮೇಲಾಗಿ ಮೈಸೂರು ಸಂಸ್ಥಾನದ ಅಧಿಕಾರವರ್ಗದ ಅನುಭವಗಳ ಸ್ವಾರಸ್ಯಪೂರ್ಣ ಘಟನೆಗಳ ಕೃತಿ ಅನ್ನಬಹುದುದಾಗಿದೆ. ವಸಾಹತುಶಾಹಿಗಳ ಆಗಮನದಿಂದಲೂ ಅನೇಕ ಪರಿಣಾಗಳು ಬೀರಿದ್ದವು. ಆ ಕಾಲದ ಉನ್ನತ ಅಧಿಕಾರಿಗಳಿಗೆ ಸಭೆ, ಸಮಾರಂಭಗಳಲ್ಲಿ ಊರುಗಳಲ್ಲಿ ಸ್ವಾಗತಿಸುವ ಪರಿಪಾಠವಿತ್ತು.ಸಾಂಸ್ಕೃತಿಕ ನಗರಿಯ ಸಂಪ್ರದಾಯದ ಸ್ವಾಗತವೂ ಜನಪದರ ಮನೋಭಾವವನ್ನೇ ಬಿಂಬಿಸುವಂತಿದ್ದವು. ಈ ಕಾಲಕ್ಕೂ ಸಭೆ ಸಮಾರಂಭಗಳಲ್ಲಿ ಸ್ವಾಗತಿಸುವ ಪರಂಪರೆಯು ಭಿನ್ನವಾಗಿಲ್ಲ. ಅಂದಿನ ಸಂಪ್ರದಾಯಿಕ ಕಲೆಗಳ ಸ್ವಾಗತವೂ ಇಂದು ಆಡಂಭರದ ಸ್ವಾಗತಗಳಾಗಿ ಬದಲಾವಣೆ ಗೊಂಡಿದೆ.

ಮೈಸೂರು ರಾಜಮನೆತನದಲ್ಲಿ ಅತಿಥಿಗಳ ಮರ್ಯಾದೆಗಳಲ್ಲಿ ಭಿನ್ನವಾಗಿದ್ದವು. ಹಿಂದೂಗಳಲ್ಲದ ಅಧಿಕಾರಗಳಿಗೆ ಮರ್ಯಾದೆ ಮಾಡಬೇಕಾದರೆ ವೇದ ಘೋಷ ಪುರಾಣವಾಗಲಿ, ಕಾವ್ಯದ ಆರ್ಶೀವಚನವಾಗಲಿ ಹೇಳಿ ಫಲಪುಷ್ಪ ಮಂತ್ರಾಕ್ಷತೆಗಳನ್ನು ಕೊಡುತ್ತಿದ್ದರು. ಹಿಂದಿನ ಸಂಪ್ರದಾಯಿಕ ಕಾಲದಲ್ಲಿ ದೇವಸ್ಥಾನಕ್ಕೆ ಬೇಟಿಕೊಟ್ಟ ಹಿಂದೂಗಳಲ್ಲದೆ ಅತಿಥಿಗಳು ಅವರಲ್ಲಿನ ದೈವದ ಕುರಿತಾದ ಭಿನ್ನವಾದ ದೋರಣೆಯು ಕಾರಣವಾಗುತ್ತದೆ. ಮುಸ್ಲಿಂ ಮತ್ತು ಕ್ರೈಸ್ತ ಧರ್ಮಗಳಲ್ಲಿ ಇಂದಿಗೂ ಹಿಂದೂ ದೇವಾಲಯಗಳಲ್ಲಿ ಕೈ ಮುಗಿಯುವ, ಪೂಜೆಯ ಪ್ರಾರ್ಥನೆಗಳನ್ನು ಅನುರಿಸುವುದು ಕಡಿಮೆಯಾಗಿದೆ. ಹೀಗಾಗಿ ಜನಪ್ರತಿನಿಧಿಗಳ ಸ್ವಾಗತವೂ ಎರಡೂ ಕಾಲಕ್ಕೂ ಭಿನ್ನವಾಗಿ ಕಂಡು ಬರುವುದಿಲ್ಲ. ಆಧುನಿಕತೆಯ ಪ್ರಭಾವದಿಂದ ಇಂದು ದೇವಾಲಯಗಳಲ್ಲಿ ಮುಕ್ತ ಅವಕಾಶವಿದ್ದರೂ ಹಿಂದಿನ ಸಂಪ್ರದಾಯದ ಪರಿಪಾಲನೆ ಗ್ರಾಮೀಣ ಭಾಗದಲ್ಲಿ ಹೆಚ್ಚಾಗಿ ಕಾಣುತ್ತೇವೆ.

ಅಮಲ್ದಾರರಾಗಿದ್ದ ರಾಮರಾವ್‌ರು ಬನ್ನೂರಿನ ಮದುವೆ ಮೆರವಣಿಗೆಯ ಪ್ರಸಂಗದಲ್ಲಿ ಸುಲ್ತಾನ್ ಸಾಹೇಬರು ಒಂದು ತಟ್ಟೆಯಲ್ಲಿ ಹಣ್ಣು ಹಾರಗಳನ್ನು ತಂದು ಸನ್ಮಾನಿಸಿದರು. ಅವರಿಗೆ ಒಂದು ಕ್ಷಣ ತಿಳಿಯದಾಯಿತು. ಈ ಮರ್ಯಾದೆಯ ಸುಬೇದಾರರು ನಮಗೆ ಬಹಳ ಬೇಕಾದವರು, ಹುಷಾರು ಎಂದು ಒಕ್ಕಲಿಗರಿಗೆ ಎಚ್ಚರಿಸೋಕೆ ಎಂದು ತಿಳಿಸಿದ್ದಾರೆ, ಪ್ರಭಾವಿ ಅಧಿಕಾರಿಯೊಬ್ಬರನ್ನು ಸನ್ಮಾನಿಸುವ ಮನಸ್ಸುಗಳ ಹಿಂದೆ ಬೇರೊಂದು ರೀತಿಯ ಚಿಂತನೆಗಳಿರುತ್ತೇವೆ. ಅಮಲ್ದಾರರ ಶಂಕೆಯು ಆಧುನಿಕ ಕಾಲಕ್ಕೂ ಅನ್ವಯಿಸುವಂತದ್ದು. ರಾಜಕಾರಣಿಗಳಾಗಲಿ, ಉನ್ನತಮಟ್ಟ ಅಧಿಕಾರಿಗಳಿಗೆ, ಸನ್ಮಾನಿಸುವ ಹಿಂದೆ ದೂರದೃಷ್ಟಿಯತೆ ಇರುವುದು ಸತ್ಯವಾಗಿದೆ. ಇದಕ್ಕೆ ರಾಮರಾವ್‌ರಂತಹ ಪ್ರಾಮಾಣಿಕ ಅಧಿಕಾರಿಗಳಿಗೂ

ಹೊರತಾಗಿಲ್ಲ. ಗಮನವನ್ನು ಕೇಂದ್ರೀಕರಿಸುವ ನಯಗಾರಿಕೆಯ ಸಂಪ್ರದಾಯಗಳು ವಾಸ್ತವದಲ್ಲಿಯೇ ಹೆಚ್ಚಾಗಿ ಕಂಡು ಬರುತ್ತವೆ.

ರಾಮರಾವ್‌ರು ಟಿ.ನರಸೀಪುರದಲ್ಲಿದ್ದಾಗ ಸಬ್‌ಡಿವಿಜನ್ ಆಫಿಸರರು ಮೂಗೂರು ಮತ್ತು ನರಸೀಪುರದ ಜಮಾಬಂದಿಗೆ ಬಂದಾಗ ಅಧಿಕಾರಿಗಳಿಗೆ ಮರ್ಯಾದೆಗಳನ್ನು ಖುದ್ದಾಗಿ ನೋಡಿಕೊಳ್ಳಬೇಕಾಗಿತ್ತು. ಸಬ್‌ಡಿವಿಜನ್ ಆಫಿಸರ್ ಊಟ ಉಪಚಾರ, ನಿದ್ರೆ, ದರ್ಬಾರು ನಡೆಸಲು ಅನುಕೂಲತೆ, ಊಟದ ಬಗ್ಗೆ ಮುಂಜಾಗ್ರತೆ ಮಾಡಬೇಕಾಗಿತ್ತು. 'ಇದರಿಂದ ಕೆಲವೊಮ್ಮೆ ಪ್ರಯೋಜನವೂ ಆಗುತ್ತಿತ್ತು ಎಂದು ಹೇಳಿಕೊಳ್ಳುತ್ತಾರೆ. ಹಿರಿಯ ಅಧಿಕಾರಿಗಳೊಬ್ಬರು ಕಿರಿಯ ಅಧಿಕಾರಿಗಳ ಸ್ಥಳಗಳ ಕಡೆಗೆ ಬಂದಾಗ ಸಾಮಾನ್ಯವಾಗಿ ಅವರು ಬಂದು ಹೋಗುವವರೆಗೂ ಖುದ್ದಾಗಿ ಸಕಲ ವ್ಯವಸ್ಥೆಗಳಿಗೂ ಜವಾಬ್ದಾರಿಯಾಗಬೇಕಿತ್ತು. ವಸಾಹತುಶಾಹಿಗಳ ಪರಿಣಾಮವೋ. ರಾಜಮನೆತನಗಳ ಸಂಪ್ರದಾಯಗಳೋ ಅತಿಥಿಗಳ ಮರ್ಯಾದೆಗಳು ಕಾಲಾಂತರದಲ್ಲಿಯೂ ಅನ್ವಯಿಸಿಕೊಂಡೆ ಬಂದಿವೆ. ಹಿರಿಯ ಅಧಿಕಾರಿಗಳ ಊಟೋಪಚಾರವನ್ನು ನೋಡಿಕೊಳ್ಳುವ ಪದ್ಧತಿಯೂ ಇಂದಿಗೂ ನಡೆದುಕೊಂಡು ಬಂದಿದೆ. ಲೇಖಕರ ಪ್ರತಿ ಅನುಭವವೂ ವಾಸ್ತವತೆಗೆ ಹತ್ತಿರವಾಗಿವೆ.

ಕಾಂತರಾಜೇ ಅರಸಿನವರು ಮುಡುತೊರೆ, ತಲಕಾಡು ಕ್ಷೇತ್ರಗಳಿಗೆ ಭೇಟಿ ಮಾಡುವ ಸಂದರ್ಭದಲ್ಲಿ ಅಮಲ್ದಾರರ ಸಕಲ ಸಿದ್ಧತೆಗಳನ್ನು ಮಾಡಿಕೊಂಡಿದ್ದರು. ಆ ಸಿದ್ಧತೆಗಳು ಗಂಡಿನ ಕಡೆ ಬೀಗರ ಔತಣದಷ್ಟೇ ನಾಜೂಕು ಎಂದೇ ಹೇಳುತ್ತಾರೆ. ಲೇಖಕರಿಗೂ ಆನಂದ ರಾಜರ ಅತಿಥ್ಯವಹಿಸಿದವರಲ್ಲಿ ಸಲಹೆಯನ್ನು ಪಡೆದರು. ಗ್ರಾಮದಲ್ಲಿ ರಾಜರ ಸವಾರಿ ಬರುವ ರಸ್ತೆಯುದ್ದಕ್ಕೂ ಸಾಲು ಮರಗಳಿಗೆ ಸುಣ್ಣ, ಕೆಮ್ಮಣ್ಣು ಪಟ್ಟೆ ಹಾಕಿಸುವುದು. ತಾಲ್ಲೂಕು ಪ್ರದೇಶದ ಗಡಿಯಲ್ಲಿ ಸುಸ್ವಾಗತದ ಲೇಖನದ ಬ್ಯಾನರ್‌ಗಳು, ಚಪ್ಪರಗಳನ್ನು ಹಾಕಿಸಿ ಹಣ್ಣು, ಹೂ, ಹೆಸರು ವಾಣಿಗಳಿಂದ ಅವುಗಳನ್ನು ಅಲಂಕರಿಸಿದರು. ಅರಸಿಯವರು ವಿಶ್ರಾಂತಿಸುವ ಸ್ಥಳದಲ್ಲಿ ಒಂದು ಹೊಸದಾದ ಪಟ್ಟಣವನ್ನೇ ನಿರ್ಮಾಣ ಮಾಡುವುದು ಸಾಮಾನ್ಯವಾಗಿದ್ದವು. ಮಹಾರಾಣಿಯವರ ಆಗಮನದಿಂದ ಹೆಚ್ಚಿನ ಜವಾಬ್ದಾರಿಯಾಗುತ್ತದೆ. ರಾಜರ ಆಗಮನದ ಹಿಂದೆ ಹಲವಾರು ಅಧಿಕಾರಿಗಳು ಬರುವರು, ಅವರ ಸೌಕರ್ಯವೂ ಮಾಡಬೇಕಾಗಿತ್ತು. ಊಟೋಪಚಾರ, ಫಲಪುಷ್ಪಗಳು, ಸ್ವಾಗತಿಸಲು ತಾಲೀಮು ನಡೆಸುವುದು ನಡೆದಿತ್ತು. ಮಹಾರಾಣಿಯವರು ಮಗುವಿಗೆ ಜನ್ಮನೀಡಿದ ಸುದ್ದಿಯಿಂದ ಅರಸಿಯವರ ಆಗಮನ ಮುಂದುಡಿದರು.

ರಾಮರಾವ್‌ರು ಮೇಲಿನ ಎಲ್ಲಾ ಸಿದ್ಧತೆಗಳು ಮುಖ್ಯ ಅತಿಥ್ಯವಹಿಸುವುದು, ಮತ್ತು ಸಭೆ ಸಮಾರಂಭಗಳನ್ನು ನೆನಪಿಸುವುದು. ಇಂದಿನ ಕಾಲಕ್ಕೂ ಸಂಪೂರ್ಣವಾಗಿ ಅನ್ವಯಿಸುತ್ತೇವೆ. ಜನಪ್ರತಿನಿಧಿಗಳು, ಮುಖ್ಯಮಂತ್ರಿಗಳು, ಸಚಿವರೂ ಬರುವಂತಹ ಸಂದರ್ಭಗಳನ್ನು ನೆನಪಿಸುತ್ತೇವೆ. ಅತಿಥಿಗಳ ಆಗಮನದಿಂದ ಹಿಡಿದು ಹಿಂತಿರುಗುವರೆಗೆ ಅವರ ಸಕಲ ಸೌಕರ್ಯಗಳನ್ನು ನೋಡಿಕೊಳ್ಳುವ

ಪರಿಪಾಠ ಉಂಟು. ಇದರ ಹಿಂದೆ ಆಯೋಜಕರ ಸ್ವಾರ್ಥವೂ ಅಡಗಿರುತ್ತದೆ. ಲೇಖಕರ ಸಿದ್ಧತೆಗಳೂ ಆಧುನಿಕ ಸಿದ್ಧತೆಗಳು ಭಿನ್ನವಾಗಿಲ್ಲ, ಆದರೆ ಗ್ರಾಮದ ವಾಸ್ತವದ ಚಿತ್ರಣವನ್ನು ಬದಲಾಯಿಸಿ ಗ್ರಾಮವನ್ನು ಮತ್ತೆ ಸಹಜ ಸ್ಥಿತಿಗೆ ತರುವಂತಹ ಮೌಢ್ಯತೆಯೇ ಹೆಚ್ಚಾಗಿರುತ್ತದೆ. ಗ್ರಾಮದ ನೈಜ್ಯತೆ ಬಿಂಬಿಸುವ ಜೊತೆಗೆ ಅದರ ಬದಲಾವಣೆಯನ್ನು ತರುವಂತಹ ನಿಟ್ಟಿನಲ್ಲಿ ಸನ್ಮಾನಿಸುವುದೇ ಉತ್ತಮವೆನಿಸುತ್ತದೆ. ನಗರ ಪ್ರದೇಶಗಳಿಗೂ ಈ ವಿವೇಚನೆ ಮಾಡಬೇಕಾಗಿದೆ.

ತಲಕಾಡಿಗೆ ಮಹಾರಾಣಿಯವರು ಭೇಟಿ ಕೊಟ್ಟ ಸಂದರ್ಭಗಳಲ್ಲಿ ಬಯಲಾಟದ ಪ್ರದರ್ಶನ, ದೇವಸ್ಥಾನ ಬೇಟಿಯು ಸಕಲ ಸಿದ್ಧತೆಯಿಂದಲೇ ನೋಡಿಕೊಂಡವರು. ರಾಮರಾವ್‌ರಿಗೆ ಬಡ್ತಿ ಪಡೆಯುವ ಆಸೆಯೂ ಹೊಂದಿರುತ್ತದೆ. ಶೂರ್ಪನಖಿಯ ಪ್ರಸಂಗದಿಂದ ಇರುಸು ಮುರುಸಾಗಿರುತ್ತದೆ. ಆದರೂ ಸಂತೋಷದಿಂದ ಸ್ವೀಕರಿಸಿದ್ದು ಅವರಿಗೆ ಸಂತೋಷವನ್ನೇ ತಂದಿರುತ್ತದೆ. ರಾಮರಾವ್‌ರ ಈ ಅನುಭವವೂ ಇಂದಿಗೂ ವ್ಯವಸ್ಥಾಪಕರ ಮನೋಭಾವ ತೋರುತ್ತದೆ. ಯಶಸ್ವಿಯಾಗಿ ನಡೆಯುತ್ತಿದ್ದ ಸಮಾರಂಭಗಳಲ್ಲಿ ಅಸಹ್ಯಕರ ಸನ್ನಿವೇಶಗಳು, ಅಪಘಾತಗಳೂ ನಡೆಯುತ್ತವೆ. ಕೆಲವೊಮ್ಮೆ ಸಮಾರಂಭದಲ್ಲಿ ಅತಿಥಿಗಳು ಬಾರದೆ ಸಮಾರಂಭವನ್ನು ನಿರಾಸವಾಗಿಸುತ್ತಾರೆ. ಅವಘಾತಗಳು ನಡೆಯುವ ವ್ಯವಸ್ಥೆಗಳು ಕಂಡುಬರುತ್ತವೆ. ಸಮಾರಂಭದ ಯಶಸ್ಸು ಮತ್ತು ಅಪಘಾತದ ಮಾಹಿತಿಯನ್ನು ಅನೇಕ ಪತ್ರಿಕೆಗಳಲ್ಲಿ ಗಮನಿಸಿರುತ್ತೇವೆ. ರಾಮರಾವ್‌ರ ಮಟ್ಟಿಗೆ ಸ್ಪರ್ಕ್ ಸಾಹೇಬರನ್ನು ಸ್ವಾಗತಿಸದೇ ಹೋದ ಸಂದರ್ಭವು ಬ್ರಿಟೀಷ್ ಅಧಿಕಾರಿಯೊಬ್ಬನ ದರ್ಪತನವಾದರೂ, ಸ್ಪರ್ಕ್‌ರಿಗೆ ಸ್ವಾಗತಿಸದೇ ಹೋದದ್ದು ಅವಮಾನವೇ ಆಗಿರುತ್ತದೆ. ಮಾತಿನ ಮೈಮನಸ್ಸಿನ ನಡುವೆಯೂ ಸಮಾಧಾನರಾಗುತ್ತಾರೆ. ಈ ಅನುಭವಗಳು ಸಹಜವಾಗಿ ಕೇಳಿರುತ್ತೇವೆ. ದೇಶದ ಗಣ್ಯವ್ಯಕ್ತಿಗಳೊಬ್ಬರು ಬೇರೊಂದು ದೇಶಗಳಲ್ಲೂ, ಸ್ವದೇಶದಲ್ಲೂ ಗುರುತಿಸದೆಯೋ, ಅಚಾನಕವಾಗಿಯೋ ಸ್ವಾಗತಿಸದೇ ಹೋದ ಸಂಗತಿಗಳು ಅವರ ಅನುಭವಗಳಿಂದ ಹೊರತಾಗಿಲ್ಲ, ಸಮಾಜದ ಗಣ್ಯ ವ್ಯಕ್ತಿಯು ಅನಾನೂಕೂಲತೆಯಿಂದ ಸಾಮಾನ್ಯನಂತೆ ತಿರುಗಾಡುವ ಪ್ರಸಂಗಗಳೂ ನಡೆದಿರುವ ಉದಾಹರಣೆಗಳಿವೆ.

ಶಿರಸ್ತೆದಾರರೊಬ್ಬರ ಅಮಲ್ದಾರರ ರಜೆಯಿಂದಾಗಿ ಚಾರ್ಜ್‌ನ್ನು ತೆಗೆದುಕೊಂಡಿದ್ದು, ಕಹಳೆಯವನಿಗೆ ಕಹಳೆ ಊದುವ ಮೂಲಕ ಮರ್ಯಾದೆಯನ್ನು ಬಯಸಿದ್ದು ಕಹಳೆಯವನು ಶಿರಸ್ತೆದಾರನು ಕುಂತಲ್ಲಿನಿಂತಲ್ಲಿ ಊದುವ ಮೂಲಕ ಹಿಂಸೆಯನ್ನು ಅನುಭವಿಸುವ ಮರ್ಯಾದೆಯು ನಗೆಗಡಲಿನಲ್ಲಿ ತಿಳಿಸುತ್ತದೆ. ಆಧುನಿಕತೆಯಲ್ಲಿ ಈ ರೀತಿಯ ಅನುಭವಗಳು ಕಡಿಮೆ ಎನ್ನಬಹುದಾಗಿದೆ. ಅಧಿಕಾರಿಗಳ ದಿನ ನಿತ್ಯದ ಕಾರ್ಯಗಳಲ್ಲಿ ಕಹಳೆ ಊದುವ ಪದ್ಧತಿ ಇಲ್ಲವಾಗಿದೆ. ಸಾಮಾನ್ಯವಾಗಿ ಇಂದು ರಾಜಕೀಯ ವ್ಯಕ್ತಿಯ ಮೆರವಣಿಗೆಯಲ್ಲಿ ಕುಡಿತದ ಅಮಲಿನಲ್ಲಿ ತಮ್ಮಟೆಗಳನ್ನು ಅಸಂಬದ್ಧವಾಗಿ ಒಡೆದು ಇರಸುಮುರಿಸು ಮಾಡಿದ ಪ್ರಸಂಗವು ನಡೆದಿದ್ದು, ಇದರಿಂದ ಬೇಸತ್ತು ಅಲ್ಲಿಂದ ಬೇಗನೆ ಹೋದ ರಾಜಕೀಯ ವ್ಯಕ್ತಿಯು

ನಗೆಪಾಟಲಿಗೆ ಇಡಾದದ್ದು ಕಾಣುತ್ತೇವೆ. ಕೆಲವೊಮ್ಮೆ ಸಮಾರಂಭಗಳಲ್ಲಿ ಧ್ವನಿಯಂತ್ರದ ವ್ಯವಸ್ಥೆ ಇಲ್ಲದೆ ಕಿರುಚಾಡಿದ ಸಂದರ್ಭಗಳು ಕಾಣುತ್ತೇವೆ.

'ಕೆಲವು ನೆನಪುಗಳು' ಕೃತಿಯಲ್ಲಿ ಹಲವಾರು ಸ್ವಾಗತಗಳ ಸಿದ್ಧತೆಗಳು ಕಂಡುಬರುತ್ತೇವೆ. ಎಲ್ಲಾ ಸಿದ್ಧತೆಗಳನ್ನು ಗಮನಿಸಿದಾಗಲೂ ಹಿಂದಿನ ಅಧಿಕಾರಿಗಳ ಸ್ವಾಗತಗಳ ಸಿದ್ಧತೆಗೂ ಇಂದಿನ ಕಾಲದ ಸಿದ್ಧತೆಗಳೂ ಬಹಳ ವ್ಯತ್ಯಾಸಗಳಿರುವಂತೆ ಕಂಡುಬರುವುದಿಲ್ಲ. ರಾಮರಾವ್‌ರು ರಾಜಮನೆತನದ ಸೇವೆಗೂ ಅಧಿಕಾರಿಯೊಬ್ಬರ ಗೌರವಕ್ಕೂ ತೋರುತ್ತಿದ್ದ ಮನೋಭಾವ ಭಿನ್ನವಾಗುತ್ತದೆ. ವಾಸ್ತವದ ಸಮಾರಂಭಗಳ ಉದ್ದೇಶಗಳು ಭಿನ್ನವಾಗಿವೆ. ಆ ಕಾಲಕ್ಕೆ ರಾಜಮಹಾರಾಜರಲ್ಲಿ ಗೌರವದ, ಭಕ್ತಿಯ ಭಾವನೆ ಜನರಲ್ಲಿತ್ತು. ಇಂದು ಹಣದ ಮಹಿಮೆ ಹೆಚ್ಚು ಕೆಲಸ ಮಾಡುತ್ತಿರುತ್ತಿವೆ. ಕೃತಿಯಲ್ಲಿ ಕೇವಲ ಸ್ವಾಗತ ಸಿದ್ಧತೆಗಳೇ ವಾಸ್ತವತೆಗೆ ಹತ್ತಿರವಾಗದೇ ಕೃತಿಯಲ್ಲಿನ ಬಹುತೇಕ ಘಟನೆಯು ಈ ಕಾಲಕ್ಕೂ ಅನ್ವಯಿಸುವಷ್ಟು ಕುತೂಹಲಕಾರಿಯಾಗಿವೆ. ವಸಾಹತುಶಾಹಿಯ ಪ್ರಭಾವವೂ ಆಧುನಿಕ ಕಾಲದಲ್ಲೂ ಮುಂದುವರೆಸಿಕೊಂಡಿದ್ದು, ಅಂದು ಹಬ್ಬದ ವಾತಾವರಣವಾಗಿದ್ದರೆ ಇಂದು ನಿರ್ಲಕ್ಷ್ಯರ ಸಮೂಹ ನೆರೆದಂತೆ ಕಂಡುಬರುತ್ತೇವೆ.

### ವಸಾಹತುಶಾಹಿ : ಅಧಿಕಾರ ಶಾಹಿ ಮತ್ತು ಅಧಿಕಾರ ವರ್ಗಗಳ ಭಿನ್ನತೆಗಳು

ಭಾರತಕ್ಕೆ ಬ್ರಿಟೀಷರ ಆಗಮನ ಬಹಳ ಹಿಂದೆಯೇ ಬಂದಾರಾದರೂ, ವಸಾಹತುಶಾಹಿ ಕಾಲವನ್ನು ಗುರುತಿಸಿದ್ದು ಮಾತ್ರ ಹದಿನೆಂಟನೇ ಶತಮಾನದಿಂದಲೇ, ಬ್ರಿಟೀಷರ ಆಡಳಿತದಲ್ಲಿನ ಪ್ರಬಲತೆ ಮತ್ತು ಹಲವಾರು ರಂಗಗಳಲ್ಲಿನ ಸುಧಾರಣೆಯಿಂದಾಗಿ ಭದ್ರವಾದ ನೆಲೆಯನ್ನೇ ಕಂಡಿತ್ತು. ಮೈಸೂರು ಸಂಸ್ಥಾನವು ವಸಾಹತುಶಾಹಿಗಳ ಆಡಳಿತಕ್ಕೆ ಒಳಪಟ್ಟಿರುತ್ತದೆ. ರಾಷ್ಟ್ರಮಟ್ಟದಲ್ಲಿ ಪ್ರಬಲವಾದ ವಿರೋಧವಿದ್ದರೂ ಪ್ರಾಂತೀಯ ಮಟ್ಟದಲ್ಲಿ ಆಡಳಿತವೂ ಸುಲಭವಾಗಿತ್ತು. ಇಂತಹ ಪ್ರದೇಶದಲ್ಲಿ ವಸಾಹತುಶಾಹಿ ಅಧಿಕಾರಿಗಳು ಇವರ ಕೈಕೆಳಗೆ ಕೆಲಸ ಮಾಡುಬೇಕಾಗಿತ್ತು. ಬ್ರಿಟೀಷರ ಕಾನೂನು ಮತ್ತು ಅರಸು ಮನೆತನದ ಸಂಪ್ರದಾಯಿಕ ಕಾನೂನುಗಳ ನಡುವೆ ದೊಡ್ಡದಾದ ವಿರೋಧವೇ ಏರ್ಪಟ್ಟಿತ್ತು. ರಾಮರಾವ್‌ರ ಕೃತಿಯು ವಸಾಹತುಶಾಹಿಗಳ ಹಿನ್ನೆಲೆಯಲ್ಲಿ ತಮ್ಮ ಅನುಭವಗಳನ್ನು ಹಂಚಿಕೊಂಡಿರುವುದು ಕೃತಿಯ ವಿಶಿಷ್ಟತೆಯನ್ನು ಪರಿಚಯಿಸುತ್ತದೆ.

ನವರತ್ನ ರಾಮರಾವ್‌ರು ಹದಿನೆಂಟನೇ ಶತಮಾನದ ಕೊನೆಯಲ್ಲಿ ಹತ್ತೊಂಬತ್ತನೇ ಶತಮಾನದ ಸ್ವಾತಂತ್ರ್ಯ ಪೂರ್ವದ ಆಸುಪಾಸಿನ ಅಧಿಕಾರಾವಧಿಯ ಘಟನೆಗಳನ್ನೇ ಆಯ್ದುಕೊಂಡು ಕೃತಿ ರಚಿಸಿದ್ದಾರೆ. ಈ ಕಾಲಕ್ಕೆ ಬ್ರಿಟೀಷ್‌ರ ವಿರುದ್ಧ ಹೋರಾಟವು ಪ್ರಾರಂಭವಾಗಿದ್ದು, ಪ್ರಾಂತೀಯ ಆಡಳಿತ ಮೇಲೂ ಇವರ ಪ್ರಭಾವ ಗಾಢವಾಗಿತ್ತು. ವಸಾಹತುಶಾಹಿಗಳ ಆಡಳಿತ ಸೂತ್ರವನ್ನು ಒತ್ತಾಯಪೂರ್ವಕವಾಗಿಯೇ ಬಳಸಬೇಕಾಗಿತ್ತು. ಅದುವರೆಗೆ ಸಂಪ್ರದಾಯಿಕವಾಗಿ ಬಂದ ಕಾನೂನು, ವಸಾಹತುಶಾಹಿಗಳ ನಡುವಿನ

ಕಾನೂನು ವ್ಯತ್ಯಾಸವು ಆಡಳಿತ ವರ್ಗಕ್ಕೆ ಅಸಮಾಧಾನ ತರಿಸಿತ್ತು. ಬಹುತೇಕ ಆಡಳಿತಶಾಹಿಗಳೇ ಉನ್ನತ ಮಟ್ಟದ ಹುದ್ದೆಗಳಿರುತ್ತಿದ್ದು ಅವರಿಗೆ ವರದಿ ಮುಟ್ಟಿಸುವುದು ಅನಂತರದ ತೀರ್ಮಾನಗಳು ಪ್ರಧಾನವಾಗಿ ಕಂಡುಬರುತ್ತದೆ.

ಮೈಸೂರು ಸರ್ಕಾರದ ಕಾಲದಲ್ಲಿ ಜಮೀನ್ದಾರಿ ಪದ್ಧತಿ ಬಹುತೇಕ ಕಡೆ ಕಂಡುಬರುತ್ತದೆ. ರಾಮರಾವ್‌ರು ಕಾರ್ಯ ನಿರ್ವಹಿಸಿದ ಯಡತೊರೆ, ನರಸೀಪುರ, ಚಾಮರಾಜನಗರ, ಚುಂಚನಕಟ್ಟೆಗಳಲ್ಲಿ ಜಮೀನ್ದಾರಿ ಪದ್ಧತಿ ರೂಢಿಸಿಕೊಂಡು ಬಂದ ಕೆಲವು ಪ್ರಬಲವಾದ ವ್ಯಕ್ತಿಗಳು ಕೃತಿಯಲ್ಲಿ ಹಾದು ಹೋಗುತ್ತಾರೆ. ಅಧಿಕಾರಶಾಹಿಗಳು ತಮ್ಮ ಕಾರ್ಯಗಳ ಯಶಸ್ಸಿಗೆ ಜಮೀನ್ದಾರಿಗಳ ಬೆಂಬಲ ಅವಶ್ಯಕವಾಗಿತ್ತು. ಕೃತಿಯಲ್ಲಿ ಅಧಿಕಾರ ವರ್ಗ ಮತ್ತು ಅಧಿಕಾರಶಾಹಿಗಳ ನಡುವಿನ ವ್ಯತ್ಯಾಸವನ್ನು ಕಾಣುತ್ತೇವೆ. ಇದರಿಂದಾಗಿ ಅಂದಿನ ಸಮಾಜದ ವಾಸ್ತವತೆಯ ಚಿತ್ರಣವನ್ನು ಕಟ್ಟಿಕೊಡುತ್ತದೆ. ದೇವರಸೇಗೌಡ, ಗುರುಕಾರರ ವಿಚಾರಣೆ, ತಂದ್ರೆಲಿಂಗ ಹಿಂದಿನ ಗಣ್ಯ ವ್ಯಕ್ತಿಗಳು, ಜಮೀನು ಕೇಸಿನಲ್ಲಿ ಕಾನೂನಿನ ತೊಡಕುಗಳು ಕಾಣುತ್ತೇವೆ.

ಮೈಸೂರಿನ ಗ್ರಾಮಾಂತರ ಪ್ರದೇಶಗಳಲ್ಲಿ ವಸಾಹತುಶಾಹಿ ಪ್ರಭುತ್ವವು ಪರಿಣಾಮವನ್ನು ಬೀರಿರಲಿಲ್ಲ. ಮೈಸೂರು ಸಂಸ್ಥಾನದ ಆಡಳಿತವೂ ನಯವಾಗಿ ಬ್ರಿಟೀಷರನ್ನು ದೂರವಿರಿಸಿಕೊಂಡಿದ್ದರು. ಸಮಾಜದಲ್ಲಿ ಅನೇಕ ತಾರತಮ್ಯಗಳನ್ನು ಒಳಗೊಂಡಿದೆ. ರಾಜಮನೆತನದ ಆಡಳಿತದ ಬಗ್ಗೆ ಜನರೂ ನಿರಾಸಕ್ತಿಯಿಂದಲೇ ಇದ್ದರು. ಬ್ರಾಹ್ಮಣ ಅಧಿಕಾರಿಗಳ ಸಂಖ್ಯೆಯು ಹೆಚ್ಚಾಗಿರುವುದು ಜನ ಸಾಮಾನ್ಯರಲ್ಲಿ ನಿರಾಸಕ್ತಿಗೆ ಕಾರಣವಾಗಿರಬಹುದಾಗಿದೆ.

ವಸಾಹತುಶಾಹಿಗಳ ವಿರುದ್ಧವಾಗಿ ಮೈಸೂರು ಸಂಸ್ಥಾನದಿಂದ ಪ್ರಬಲವಾದ ವಿರೋಧವೂ ಕಂಡುಬರುವುದಿಲ್ಲ. ಬ್ರಿಟೀಷರಿಗೆ ಕಪ್ಪಗಳನ್ನು ನೀಡಿ ಅಂತರವನ್ನು ಕಾಯ್ದುಕೊಂಡಿದ್ದರು. ಹಾಗಾಗಿ ಬ್ರಿಟೀಷರ ಅಧೀನದಲ್ಲಿಯೇ ಇರಬೇಕಿತ್ತು. ಪ್ರಾಂತೀಯವಾಗಿ ಅಧಿಕಾರವರ್ಗಕ್ಕೆ ಸಹಿಸದಾಗಿತ್ತು. ಕಾನೂನಿನಲ್ಲಿದ್ದ ತೊಡಕುಗಳಿಂದ ಅಸಮಾಧಾನವನ್ನು ತರಿಸಿದ್ದವು ನವರತ್ನ ರಾಮರಾವ್‌ರು ಅಮಲ್ದಾರಾಗಿದ್ದ ಅನೇಕ ಪ್ರಕರಣಗಳನ್ನು ಪ್ರಮಾಣೀಕರಾಗಿ ನಿಭಾಯಿಸಿದರು. ಬ್ರಿಟೀಷರ ಆಡಳಿತ ನೀತಿಯಿಂದಾಗಿ ಟೀಕೆಗೆ ಒಳಪಟ್ಟಿದ್ದಾರೆ. ಇಂತಹ ಪಕ್ಷಪಾತದ ಆಡಳಿತದಿಂದಾಗಿ ದಿವಾನ್‌ರಲ್ಲಿದ್ದ ಒಳಜಗಳಗಳು ತೋರುತ್ತಾರೆ. ಬ್ರಿಟೀಷರ ಹೊಡೆದು ಆಳುವ ನೀತಿಗೆ ಟೀಪ್ಪುವಿನಂತೆ ಧೀರ ಚೇತನ ಮೊರೆಯಾಗಿದ್ದು ಕೃತಿಯಲ್ಲಿ ನೆನೆಯುತ್ತಾರೆ.

ಅದುವರೆಗೂ ಸಂಪ್ರದಾಯಿಕವಾಗಿ ನಡೆದುಬಂದ ಕಂದಾಯ ಪದ್ಧತಿ ಭೂ ನಿರ್ವಹಣೆ ಮುಂತಾದ ರಂಗಗಳಲ್ಲಿನ ಬೆಳವಣಿಗೆಗಳು ಅಧಿಕಾರವರ್ಗಕ್ಕೆ ಸಹಿಸದಾಗಿತ್ತು. ಪ್ರಾಂತೀಯ ಸಂಸ್ಥಾನಕ್ಕೆ ಒಳಪಡುವುದೋ, ಬ್ರಿಟೀಷರ ಅಧೀನಕ್ಕೆ ಒಳಪಡವುದೋ ಎಂಬ ದ್ವಂದ್ವಗಳು ಕಾಣಲಾರಂಭಿಸಿದವು. ನಗರ ಮತ್ತು ಗ್ರಾಮ

ಪ್ರದೇಶಗಳಲ್ಲಿ ಬ್ರಿಟೀಷರ ಆಳ್ವಿಕೆ ಪ್ರಬಲವಾಗಿದ್ದು ನಗರಗಳ ಬೆಳವಣಿಗೆಗಳು ಅಧಿಕಾರವರ್ಗವನ್ನು ಆಕರ್ಷಿಸಿದ್ದು ಗ್ರಾಮೀಣ ಜನರ ಬದುಕನ್ನು ನಿರ್ಲಕ್ಷ್ಯಗೆ ಒಳಗಾಗುವಂತೆ ಮಾಡಿತ್ತು. ಬ್ರಿಟೀಷ್‌ರ ತಾರತಮ್ಯ ದೋರಣೆಗಳು ಸ್ಥಳೀಯರನ್ನು ವಿರೋಧಿಸುವಂತೆ ಕಂಡುಬಂದಿದ್ದು ಮೈಸೂರು ಸಂಸ್ಥಾನವೂ ಸ್ಥಳೀಯರಿಗೆ ಮೆಚ್ಚುಗೆಗಳಿಸಲು ವಿಫಲವಾಗಿತ್ತು.

ವಸಾಹತುವಾದಿಗಳ ಶೋಷಣೆಯನು ೧೫೦ ವರ್ಷಗಳಷ್ಟು ದೀರ್ಘಕಾಲ ಸಹಿಸಬೇಕಾಯಿತು. ರಾಜ್ಯದಲ್ಲೇ ಆಗಲಿ, ಹೊರಗಡೆಯೇ ಆಗಲಿ ಈ ಶೋಷಣೆಯನ್ನು ನಿರಂತರವಾಗಿತ್ತು. ಬ್ರಿಟೀಷರ ರಾಜಕೀಯ ನೀತಿ, ವಿವಿಧ ರಂಗಗಳಲ್ಲಿನ ಸುಧಾರಣೆಗಳು ಜನಸಾಮಾನ್ಯರನ್ನು ಬ್ರಿಟೀಷರ ಪರವಾದ ಧೋರಣೆಗಳನ್ನು ತಾಳುವಂತಿದ್ದವು.

**ಹಾಸ್ಯಪ್ರಸಂಗಳು**

ನವರತ್ನ ರಾಮರಾವ್ ಅವರು ತಮ್ಮ ಜೀವನಾನುಭವಗಳನ್ನು ಹೇಳಿಕೊಳ್ಳುವಲ್ಲಿ, ನಿರೂಪಿಸುವಲ್ಲಿ ತಂತ್ರಾರಿಕೆಯನ್ನೇ ಬಳಸಿದ್ದಾರೆಯೇ ಎನ್ನುವಷ್ಟು ಅನುಮಾನಗಳು ಕಾಡುತ್ತೇವೆ. ಇಂದಿಗೂ ಓದುಗರ ಮನೋಭಾವಕ್ಕೆ ಹತ್ತಿರವಾಗಿ ಬಿಡುವ ಕೌಶಲತೆ ಹೊಂದಿದೆ. ಲೇಖಕರ ನೆನಪುಗಳ ಘಟನೆಗಳಲ್ಲಿ ಹಾಸ್ಯದ ಪ್ರಸಂಗಗಳನ್ನು ನಯವಾಗಿಯೇ ಬರೆಸಿದ್ದಾರೆ. ಹಾಸ್ಯದ ಸನ್ನಿವೇಶಗಳು ಕೃತಿಯಲ್ಲಿ ಸ್ವಾರಸ್ಯ ಪೂರ್ಣ ಪ್ರಸಂಗಗಳಾಗಿ ಓದುಗರನ್ನು ನಗೆಗಡಲಿನಲ್ಲಿ ತೆಲಿಸುತ್ತೇವೆ. ರಾಮರಾವ್‌ರು ಕಾನೂನು ಪದವಿಗಾಗಿ ಮುಂಬೈಗೆ ತೆರಳಿದಾಗ ಸ್ನೇಹಿತರೆಲ್ಲಾ ಶಂಕರ್‌ಅಯ್ಯರ್‌ನ ಹೊಟೇಲಿನಲ್ಲಿ ಊಟ ಮಾಡುತ್ತಿದ್ದು, “ಒಂದು ದಿನ ದಾಸಪ್ಪನವರು ಶಂಕರ್ ಅಯ್ಯರ್‌ನನ್ನು ಬಿಮ್ಮನೆ ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅಳುಹತ್ತಿದರು. ಅಲ್ಲಿದ್ದವರೆಲ್ಲಾ ಗಾಬರಿಯಾಗಿ ಇದೇನು? ಎಂದು ಕೇಳಿದಾಗ ದಾಸಪ್ಪನವರು ಕಣ್ಣೀರು ಹಾಕುತ್ತ ಬಹು ಜನ ಕೆಟ್ಟ ಅಡುಗೆಯವರನ್ನು ನೋಡಿದ್ದೇನೆ. ಆದರೆ ಇವನ ಸಮವನ್ನು ನೋಡಿಲ್ಲ, ಇವನೇ ಇವನು ಇವತ್ತಿನ ಇವನ ಅಡಿಗೆಯನ್ನು ಇವನೇ ಊಟ ಮಾಡಿ ಸತ್ತರೆ ಏನು ಗತಿ? ಇಂಥ ಇನ್ನೊಬ್ಬನು ಬರುತ್ತಾನೆಯೇ? ಅಳು ಬರುವುದಿಲ್ಲವೇ ಮತ್ತೆ?” ಎನ್ನುತ್ತಾರೆ. ಲೇಖಕರು ಸಂದರ್ಭಕ್ಕೆ ತಕ್ಕಂತೆ ಹಾಸ್ಯವನ್ನು ಬೇರೆಸುತ್ತ ನೆನಪುಗಳನ್ನು ಬಿಚ್ಚಿಕೊಳ್ಳುತ್ತೇವೆ.

ಅಂದಿನ ಕಾಲದಲ್ಲಿ ಉನ್ನತ ಹುದ್ದೆಗಳನ್ನು ನಿರ್ವಹಿಸುವ ಅಧಿಕಾರಿಗಳಿಗೆ ವಿಶೇಷವಾದ ಸ್ವಾಗತಗಳಿರುತ್ತಿದ್ದವು. ಅಂತಹ ವಿಶೇಷತೆಗಳಲ್ಲಿ ಕಹಳೆಯು ಒಂದು, ಆಧುನಿಕತೆಯಲ್ಲೂ ಸಂಪ್ರದಾಯಗಳು ಪರಿಪಾಲನೆಯಾಗುತ್ತಿರುವುದು ಕಾಣುತ್ತಿದ್ದೇವೆ. ಅಮಲ್ದಾರರು ಐದು ದಿನಗಳ ರಜೆಗಾಗಿ ಹೊರಟಿದ್ದು ಹುದ್ದೆಗೆ ಶಿರಸ್ತೆದಾರರು ಇನ್‌ಚಾರ್ಜ್ ತೆಗೆದುಕೊಳ್ಳುತ್ತಾರೆ. ಅಮಲ್ದಾರರಿಗೆ ಸಲ್ಲುವ ಮರ್ಯಾದೆಯು ನನಗೂ ಸಲ್ಲಬೇಕು ಎಂದು ಕಹಳೆ ಊದುವನಿಗೆ ಹೇಳುತ್ತಾನೆ. ಕಹಳೆಯವನ ಕಾಟದಿಂದ ಬೇಸತ್ತ ಶಿರಸ್ತೆದಾರರು ಈ ಕಹಳೆಯವನು ಚಿತ್ರಹಿಂಸೆ ಮಾಡುತ್ತಿದ್ದು. ‘ಬೆಳಿಗ್ಗೆ ಬಹಿರ್ಭೂಮಿಗೆ ಹೋದರೆ

ಊದುತ್ತಾನೆ. ಹೊಳೆಗೆ ಸ್ನಾನಕ್ಕೆ ಹೋದರೆ ಕೂಗು, ಒಂದಕ್ಕೆ ಹೋದರೆ ಕೂಗು, ಎರಡಕ್ಕೆ ಎದ್ದರೆ ಆವಾಜು, ಯಾಕೋ ಹೀಗೆ ಕಾಡಿಸುತ್ತಿಯಾ ನಿಲ್ಲಿಸೋ ಸಾಕು ಎಂದರೆ, ಕಹಳೆಯವನು ಯಜಮಾನರ ಅಪ್ಪಣೆಯಾಗದೆ ನಿಲ್ಲಿಸುವುದೇ ಎಂದು ಹೇಳುತ್ತಾನೆ. ಅಮಲ್ದಾರರು ಎಲೋ, ಯಾಲಕ್ಕಿ ಯಾಕೋ ಹಾಗೆ ಹಿಂಸೆ ಮಾಡುತ್ತೀ? ಅವರು ಒಂದಕ್ಕೆ ಹೋಗೋದು, ಎರಡಕ್ಕೆ ಹೋಗೋದು ಎಲ್ಲರಿಗೂ ತಿಳಿಯಬೇಕೇನೋ? ಅವರು ಕಛೇರಿ ಹೋಗೋದು ತಿಳಿದರೆ ಸಾಕು ಕಣೋ' ಎಂದು ಕಹಳೆಯವನಿಗೆ ತಿಳಿಸುತ್ತಾನೆ.

ಕೃತಿಯಲ್ಲಿ ಇಂತಹ ಹಾಸ್ಯ ಪ್ರಸಂಗಗಳು ಓದುಗರನ್ನು ಕುತೂಹಲಕಾರಿಯಾಗುವಂತೆ ಮಾಡುತ್ತವೆ. ಅನುಭವಕ್ಕೆ ಬಂದ ಹಾಸ್ಯ ಸನ್ನಿವೇಶಗಳು ನಿರೂಪಣಾ ವಿನ್ಯಾಸದ ತಂತ್ರಗಾರಿಕೆಯಾಗಿ ಬಳಸಿದಂತೆ ಗೋಚರವಾಗುತ್ತದೆ. ಯಡೆತೊರೆ ಗ್ರಾಮವೊಂದರಲ್ಲಿ ಮೈ ಮೇಲೆ ದೇವತೆ ಬಂದ ಹೆಣ್ಣು ಮಗಳು ಕಿಕ್ಕಿರಿದ ಗ್ರಾಮಸ್ಥರ ನಡುವೆ ಸುಬೇದಾರನ್ನು ಮಾತನಾಡಿಸುವಾಗ ತಾನು ದೇವರು ಎಂಬುದನ್ನು ಮರೆತು ಬುದ್ಧಿ ಎನ್ನುತ್ತಾಳೆ. ಲೇಖಕರು ದೇವರು ನನ್ನನ್ನು ಬುದ್ಧಿ ಎನ್ನಬಹುದೇ? ಎಂದಾಗ ಕೆಂಪನಂಜಮ್ಮ ನಿಮ್ಮ ಮನಸ್ಸನ್ನು ನೋಡೋಣ ಅಂತಹ ಬುದ್ಧಿ ಅಂದಿದಾಗಿ ಈ ಊರೋರು ಭಕ್ತಿ ಪೂಜೆ ಎಲ್ಲಾ ಬಿಟ್ಟು ಗುಡಿ ಬಾಗಿಲು ಮುಚ್ಚಿದಕ್ಕೆ ಬುದ್ಧಿ ಕಲಿಸಿದೆ. ಈಗ ಬುದ್ಧಿ ಬಂತೋ? ನನ್ನ ಮಕ್ಕಳಿರಾ? ಎಂದು ಚಾಣಾಕ್ಷತನದ ಉತ್ತರವನ್ನು ನೀಡುತ್ತಾಳೆ. ಮೂಢನಂಬಿಕೆಯಿಂದ ಕೂಡಿದ ಹಾಸ್ಯಪ್ರಸಂಗವೂ ಸಮಾಜದ ಆಚರಣೆಗಳನ್ನು ತೋರುತ್ತದೆ.

ಮನುಷ್ಯ ಎಷ್ಟೇ ಎತ್ತರಕ್ಕೇರಿದರು ದಕ್ಷ, ಪ್ರಾಮಾಣಿಕ, ದುಷ್ಟನೆನಿಸಿಕೊಂಡಿದ್ದರು. ಸ್ನೇಹಿತರ ಒಡನಾಟದಲ್ಲಿ ಜಗಳಗಳು, ಪ್ರೀತಿ, ಅಪವಾದಗಳು ಕಾಲಾಂತರದಲ್ಲಿ ನೆನಿಸಿಕೊಂಡಾಗ ಹಾಸ್ಯವನ್ನೇ ತರುತ್ತದೆ. ರಾಮರಾವ್‌ರು ಮುಂಬೈಯಲ್ಲಿದ್ದಾಗ ಸಂಗೀತಾಭ್ಯಾಸದ ಆಸಕ್ತಿ ಹೆಚ್ಚಾಗಿತ್ತು. 'ವೀರಬೋಣಿ' ರಾಗದ ಜೊತೆಗೆ ಪಿಟೀಲು ನುಡಿಸುತ್ತಿದ್ದರು. ಅವರ ಅಭ್ಯಾಸದ ಕಿರುಕುಳವನ್ನು ತಾಳಲಾರದ ಸ್ನೇಹಿತರು ಜಗಳವಾಡಿ ಹೊರ ನಡೆಯುತ್ತಿದ್ದರು. ಮನೆಮಾಲಿಕರು ನೀವು ಪಿಟೀಲು ಬಹಳ ಚೆನ್ನಾಗಿ ನುಡಿಸುತ್ತಿರಾ ಸ್ವಲ್ಪ ಕೊಡುವಿರ ಎಂದು ಕೇಳಿದರು. ರಾಮರಾವ್‌ರಿಗೆ ಯಾರಾದರೂ ಸಂಗೀತದ ಬಗ್ಗೆ ಪ್ರಶಂಸೆ ಮಾತು ಹೇಳಿದಾಗ ಎಲ್ಲಿಲ್ಲದ ಹಿಗ್ಗು, ಪಿಟೀಲನ್ನು ಅವರಿಗೆ ಕೊಟ್ಟರು. ಮನೆಮಾಲಿಕರು ಪಿಟೀಲನ್ನು ತೆಗೆಯದೇ ತನ್ನಲ್ಲೇ ಇಟ್ಟುಕೊಂಡು ರಜಾ ದಿನ ಬಂದಾಗ ಕೊಟ್ಟಿದ್ದರು. ಲೇಖಕರು ಕೃತಿಯನ್ನು ಒಂದು ದೃಷ್ಟಿಕೋನದಲ್ಲಿ ರಚಿಸಿದಂತಿಲ್ಲ ಹಲವಾರು ಘಟನೆಗಳ ಆಗರವಾಗಿರಿಸಿದ್ದಾರೆ. ಸಂಗೀತಾಭ್ಯಾಸವೂ ಅವರಲ್ಲಿ ಶ್ರದ್ಧೆಯನ್ನು ತೋರ್ಪಡಿಸುತ್ತಾದರೂ, ಓದುಗರಿಗೆ ನಗೆಯನ್ನು ಉಂಟುಮಾಡುತ್ತದೆ.

ಲೇಖಕರ ಮನೋಭಾವವೇ ಭಿನ್ನವಾಗಿರಬೇಕು ಎಷ್ಟೇ ಕೂತುಹಲಕಾರಿ ಪ್ರಸಂಗಗಳನ್ನು ಕಟ್ಟಿಕೊಟ್ಟಿದ್ದರು. ಹಾಸ್ಯದ ಸನ್ನಿವೇಶಗಳು ಕೃತಿಯನ್ನು ಮತ್ತೊಂದು ರೀತಿಯಲ್ಲಿ ಗುರುತಿಸಿದಂತೆ

ಮಾಡುವಂತಿವೆ. ಗರ್ಗೇಶ್ವರಿಯಲ್ಲೆ ಲಚ್ಚಿ ಸಾಬರೊಬ್ಬರು ದರ್ಪತನದಿಂದ ಮನೆಯ ಪಕ್ಕದ ಕೊಳಕನ್ನು ಸ್ವಚ್ಛಗೊಳಿಸದೆ ಉಪೇಕ್ಷೆ ಮಾಡುತ್ತಾನೆ. ಲೇಖಕರ ಜಾಣ್ಮೆಯಿಂದ ಅವರನ್ನು ತಮ್ಮ ಬಳಿಗೆ ಓಡಿಬರುವಂತೆ ಮಾಡುತ್ತಾರೆ. ಕೊಳ್ಳೆಗಾಲದ ಶೆಟ್ಟರೊಬ್ಬರು ಮಾಲಂಗಿಯಲ್ಲಿ ಹೊಳೆದಾಡಲು ಹೋಗಿ ಮುಳುಗುತ್ತಿದಾಗ ಪೊಲೀಸ್‌ನೊಬ್ಬ ಅವನನ್ನು ಬದುಕಿಸುತ್ತಾನೆ, ಪೊಲೀಸ್‌ನಿಗೆ ಭಕ್ಷಿಸು ಕೊಡದೆ ಸತಾಯಿಸಿದ ಶೆಟ್ಟಿಯನ್ನು ಹೊಳೆಯಲ್ಲಿ ಎಲ್ಲಿದ್ದನೋ ಅಲ್ಲೇ ಬಿಟ್ಟು ಬರುವಂತೆ ತಿಳಿಸಿದನು. ಈ ಪ್ರಸಂಗವು ಎಲ್ಲಾರನ್ನು ನಗಿಸಿ ಕೊನೆಗೆ ಭಕ್ಷಿಸು ಕೊಡಿಸುವಲ್ಲಿ ಯಶಸ್ವಿಯಾಗುತ್ತಾರೆ.

ಎಲ್ಲಾ ಹಾಸ್ಯ ಪ್ರಸಂಗಗಳಿಗಿಂತಲೂ ಪ್ರಧಾನವಾಗಿ ಗಮನಕ್ಕೆ ಬರುವುದೇ ಶೂರ್ಪನಖಿಯ ಪಾತ್ರದ ಸನ್ನಿವೇಶವಾಗಿದೆ. ತಲಕಾಡಿನ ಸಂದರ್ಶನ ಕಾಲದಲ್ಲಿ ಬಯಲಾಟವನ್ನು ವೀಕ್ಷಿಸುವ ಬಯಕೆ ವ್ಯಕ್ತಪಡಿಸಿರುತ್ತಾರೆ. ಅತ್ಯಂತ ಎಚ್ಚರಿಕೆಯಿಂದ ಬಯಲಾಟವನ್ನು ವ್ಯವಸ್ಥೆಗೊಳಿಸಿದ್ದರು. ರಾಮಾಯಣದ ಎಲ್ಲಾ ಪಾತ್ರಗಳು ಮುಗಿದು ಶೂರ್ಪನಖಿಯ ಪ್ರಸಂಗವೂ ಅಧಿಕಾರಿಗಳನ್ನು ಬೆಚ್ಚಿ ಬೀಳಿಸುವಂತಹ ಘಟನೆ ನಡೆದು ಹೋಯಿತು. "ಅಲಂಕಾರ ಮಾಡಿಕೊಂಡು ಬಂದ ಶೂರ್ಪನಖಿಯೂ ಏಕಾಏಕಿ ಥಂಗ್ ಅಂತ ಹಾರುತ್ತ ಚಿರುತ್ತ ಬಂದಳು, ಎಲ್ಲದರಗಿಂತ ಅವಳ ಸ್ತನಗಳು ಆ ಕೆಲಸಕ್ಕಾಗಿ ಹೇಳಿ ಮಾಡಿಸಿದ ಎರಡು ಬಾರಿ ದಿಂಬುಗಳು, ಅವಳು ಪ್ರದರ್ಶಿಸಿದ ಕೂಡಲೇ ನಾಟಕಾಚಾರ್ಯನು 'ಥೈ ಥೈ ಥಕ್ಕಡದಿಂತದಗಿನ ತೋಂ' ಅಂತ ಘರ್ಜಿಸಿದ, ನಗಾರಿಯ ಶಬ್ದಕ್ಕೆ ಅವಳು ಮೇಲೆ ನೆಗೆದು, ಎಡಕ್ಕೆ ಬಲಕ್ಕೆ ತಿರುಗಿ, ಕುಣಿದಳು ಒಂದೊಂದು ನೆಗೆತಕ್ಕೂ ತನ್ನ ವಿಪುಲ ಸ್ತನಗಳು ಭೂಮ್ಯಂತರಿಕ್ಷಗಳನ್ನು ದಿಕ್ಕುಗಳನ್ನು ಮೋಹಗೊಳಿಸುವಂತೆ ತಾಂಡವ ವಾಡಿಸಿದಳು. ಅಮಲ್ದಾರರು ಈ ಸನ್ನಿವೇಶಕ್ಕೆ ಬೆಚ್ಚಿಬಿದ್ದರು ಇರುಸು ಮುರುಸಾದ ಈ ಹಾಸ್ಯ ಪ್ರಸಂಗವೂ ನೆರೆದ ಗ್ರಾಮಸ್ಥರಿಗೆ ರಸದೌತಣವನ್ನೇ ನೀಡಿದಂತೆ ಕಾಣುತ್ತದೆ. ಇಡೀ ಪ್ರಸಂಗವೂ ಪ್ರೇಕ್ಷರನ್ನು ನಗೆಗಿಡಾಗಿತ್ತು. ಓದುಗರಿಗೂ ಹಾಸ್ಯದ ಜೊತೆಗೆ ರಸವತ್ತಾದ ಚಿತ್ರಣವಾಗಿ ಕಾಣುತ್ತದೆ.

**ಇತರೆ ಆಸಕ್ತಿಗಳು**

ರಾಮರಾವ್‌ರು ಸಾಹಿತ್ಯಾಸಕ್ತಿ ಚಿಕ್ಕಂದಿನಿಂದಲೇ ಮೈಗೂಡಿಸಿಕೊಂಡಿದ್ದರು. ಇಂಗ್ಲೀಷ್ ಸಾಹಿತ್ಯದ ಉಪಾಸಕರಾಗಿದ್ದ ಅವರು ಬ್ರಾಡ್ಲೆ ಪುಸ್ತಕ ಓದಿ ಆನಂದಿಸಿದ್ದರು. ಪೋಪ್‌ನ 'ವಿಶ್ವಪ್ರಾರ್ಥನೆ, ವುಲ್ಫ್‌ನ ಸರ್‌ಜಾನ್ ಮೂರಿನ 'ಭೂ ಸಮಾದಿ' ಹುಡ್‌ನ 'ಯೂರ್ಜಿ ಆರಾರಿ', ಲಂಬ್‌ನ 'ಯೂಲಿಸೀಸ್‌ನ ಪ್ರವಾಸ', 'ಇಂಡಿಯನ್ ಹೊಳೆಯ ಪ್ರಗತಿ' ಓದಿ ಆನಂದಪಟ್ಟಿದ್ದಾರೆ. ಇಂಗ್ಲೀಷ್‌ನಲ್ಲಿ ಕಾದಂಬರಿಗಳನ್ನು ಬರೆದು ವಿಮರ್ಶಕರ ಮೆಚ್ಚಿಗೆಗಳಿಸಿದ್ದಾರೆ. 'ಟೇಲ್ ಅಂಡ್ ಟಬ್', ಷೇಕ್ಸ್‌ಪಿಯರ್ ನಾಟಕಗಳ ಮೇಲೆ ಲೇಖನ, ಮಾಸ್ತಿಯವರ 'ಚೆನ್ನಬಸವನಾಯಕ' ಕೃತಿಯನ್ನು ಇಂಗ್ಲೀಷ್‌ಗೆ ಭಾಷಾಂತರಿಸಿದ್ದಾರೆ. 'ಇಂಡಿಯನ್ ಪೆಟ್ರಿಯಾಟಿಕ್' ಪತ್ರಿಕೆಯಲ್ಲಿ ಲೇಖನಗಳು, ನಿಕೊಲೊ ಮೆಕಾವಲ್ಲಿಯರ 'ದ ಪ್ರಿನ್ಸ್' ಕೃತಿಯನ್ನು

'ಪ್ರಭುನೀತಿ' ಎಂದು ರಚಿಸಿದ್ದಾರೆ. ಕನ್ನಡ ಸಾಹಿತ್ಯದಲ್ಲಿ ತೊಡಗದೇ ಹೋದರು ಇಂಗ್ಲೀಷ್ ಸಾಹಿತ್ಯದ ರಚನೆ 'ಕೆಲವು ನೆನಪುಗಳು' ರಚಿಸಲು ಸಾಕ್ಷಿಯಾಗಿದೆ.

ಮೈಸೂರು ಸರ್ಕಾರದಲ್ಲಿ ಅಧಿಕಾರಿಗಳಿಗೆ ಕುದುರೆ ಸವಾರಿ ಮತ್ತು ಬಂದೂಕಿನ ವಿದ್ಯೆಗಳನ್ನು ಕಲಿಯುವ ಅಭ್ಯಾಸವಿತ್ತು. ಒಳ್ಳೆಯ ಕುದುರೆ ಸವಾರನಾಗಬೇಕೆಂಬುದು ಅವರಲ್ಲಿ ಆಸೆಯಾಗಿತ್ತು. ಅವರಲ್ಲಿ ಎರಡು ಕುದುರೆ ಸಾಕಿಕೊಂಡಿದ್ದು ಕಾಂತರಾಜ್ ಅರಸಿಯವರು ಗ್ರಾಮದ ಭೇಟಿಯ ನೆನಪಾಗಿ ಗ್ಯಾಲ್ವೆ ಕುದುರೆಯನ್ನು ನೆನಪಿಗಾಗಿ ಕೊಟ್ಟಿದ್ದರು, ಬಂದೂಕು ಸಹ ಪ್ರಿಯ ವಸ್ತುಗಳಲ್ಲಿ ಒಂದಾಗಿತ್ತು.

ಸಂಗೀತದ ಮೇಲೆ ಕಾಲೇಜ್ ದಿನಗಳಿಂದಲೂ ಆಸಕ್ತರಾಗಿದ್ದರು. ಹಾಗಾಗಿಯೇ ಸಂಗೀತಗಾರರನ್ನೂ ಕರೆಯಿಸಿ, ಕಛೇರಿ ಮಾಡಿಸಿ ಅವರಿಗೆ ಹಣವನ್ನು ನೀಡಿ ಪ್ರೋತ್ಸಹಿಸುತ್ತಿದ್ದರು. ಸಂಗೀತದ ಜೊತೆಗೆ ಭರತನಾಟ್ಯ ಮತ್ತು ನಾಟಕಗಳನ್ನು ಇಷ್ಟಪಡುತ್ತಿದ್ದರು. ರಾಮರಾವ್‌ರು ಬಹುಮುಖ ಪ್ರತಿಭೆಯುಳ್ಳವರಾಗಿದ್ದು ಎಲ್ಲಾ ರಂಗಗಳಲ್ಲೂ ತಮ್ಮನ್ನು ತೊಡಗಿಸಿಕೊಂಡಿತಿದೆ. ಕಾವೇರಿ ತೀರವು ಲೇಖಕರಿಗೆ ನೆಚ್ಚಿನ ತಾಣವಾಗಿದೆ. ಕಾವೇರಿಯನ್ನು ಕುರಿತು ವಾಗ್ಮಿದ ಸಾಲದು ಎಂದು ವರ್ಣಿಸುತ್ತಾರೆ. ನದಿಯನ್ನು ವರ್ಣಿಸುವಲ್ಲಿ ಸ್ವಾಭಾವಿಕವಾಗಿ ಚಿತ್ರಿಸಿದ್ದಾರೆ.

## ವಿನ್ಯಾಸ ಕ್ರಮ

ಈ ಕೃತಿಯು ಐವತ್ತು ವರ್ಷಗಳ ಹಿಂದಿನ ಕಾಲದ ಜನಜೀವನವನ್ನು, ಆ ಕಾಲದ ಸಾಮಾಜಿಕ ಜೀವನವನ್ನು ಚಿತ್ರಿಸಿದ್ದಾರೆ. ಸರ್ಕಾರ ಮತ್ತು ಸಮಾಜದ ನಡುವಿನ ಸಂಬಂಧಗಳ ಮಾಹಿತಿಯ ಒದಗಿಸಿದ್ದಾರೆ. ವಸಾಹತುಶಾಹಿ ಕಾಲಕ್ಕೆ ಬರುವಂತಹ ಹಲವಾರು ಅಧಿಕಾರಿಗಳು, ಘಟನೆಗಳು, ಸಮಸ್ಯೆಗಳು, ರೈತರು, ಹೀಗೆ ಹತ್ತು ಹಲವಾರು ರಂಗಗಳಲ್ಲಿನ ಪರಿಚಯವನ್ನು ನೆನಪಿಸುತ್ತದೆ. ಲೇಖಕರು ತಮ್ಮ ಅಧಿಕಾರಾವಧಿಯಲ್ಲಿ ನೆನಪಿಗೆ ಬಂದ ಹಲವಾರು ಘಟನೆಗಳನ್ನು ಕೃತಿಯಾಗಿಸಿದ್ದಾರೆ. ಒಂದು ಕೃತಿಯ ಯಶಸ್ಸಿನ ಹಿಂದೆ ವಿನ್ಯಾಸ ಕ್ರಮವು ಬಹುಮುಖ್ಯವಾಗುತ್ತದೆ.

ನವರತ್ನ ರಾಮರಾವ್ ಅವರ 'ಕೆಲವು ನೆನಪುಗಳು' ಕೃತಿಯಲ್ಲಿನ ಜೀವನಾನುಭವಗಳು ಸೀಮಿತ ಅವಧಿಯಲ್ಲಿನ ಘಟನೆಗಳನ್ನು ಮಾತ್ರ ಗುರುತಿಸಿದ್ದಾರೆ. ಕೃತಿಯಲ್ಲಿನ ವಿನ್ಯಾಸಕ್ರಮವು ಒಂದು ಕಾಲಘಟ್ಟದ ಚಿತ್ರಣವೆಂಬಂತೆ ರಚಿಸಿದ್ದಾರೆ. ಆತ್ಮಕಥೆಯನ್ನು ರಚಿಸುವಾಗ ಲೇಖಕರು ತೆಗೆದುಕೊಂಡ ನಿರ್ಧಾರಗಳು ಹೆಚ್ಚು ಸೂಕ್ತವೆನಿಸುತ್ತವೆ. ಲೇಖಕರು ಆತ್ಮಕಥೆಯನ್ನು ರಚಿಸಿದ್ದರೂ ಇತರರಂತೆ ಹುಟ್ಟು, ಬೆಳವಣಿಗೆ, ಕಷ್ಟ ಸುಖ, ವೈಯಕ್ತಿಕ ವಿಚಾರಗಳು, ಕೌಟುಂಬಿಕ ವಿಚಾರಗಳನ್ನು ಬರೆದುಕೊಳ್ಳಲು ಹೊದವರಲ್ಲ, ಇಡೀ ಕೃತಿಯ ಕಥಾವಸ್ತು ತಮ್ಮ ವೃತ್ತಿ ಜೀವನದಲ್ಲಿ ಅನುಭವಕ್ಕೆ ಬಂದ ನೆನಪುಗಳನ್ನು ಕೃತಿಯಲ್ಲಿ ಬರೆದು ಕೊಂಡಿದ್ದಾರೆ.

ಲೇಖಕರ ಆತ್ಮಕಥೆ ಎಂಬಂತೆ ಗ್ರಾಸವಾದರೂ ಈ ಕೃತಿಯೂ ಕೇವಲ ಆತ್ಮಕಥೆಯಾಗಿ ಉಳಿದಿಲ್ಲ, ಕಾದಂಬರಿಯಂತೆ ಇಲ್ಲಿ ಹಲವಾರು ಪಾತ್ರಗಳು ಘಟನೆಗಳನ್ನು ತಿಳಿಸುತ್ತಾ ಹೋಗುತ್ತಾರೆ. ತಾವು ಕಂಡ

ಸಮಾಜದಲ್ಲಿನ ಸಾಮಾನ್ಯ ವ್ಯಕ್ತಿಗಳಿಂದ ಉನ್ನತ ವ್ಯಕ್ತಿಗಳ ಕಥೆಯಾಗಿಸಿದ್ದಾರೆ. ಲೇಖಕರೇ ಕೃತಿಯ ಕೇಂದ್ರವ್ಯಕ್ತಿಯಾಗಿದ್ದರೆ. ಅದು ತಮ್ಮ ಕತೆಯಾಗದೆ ತಾವು ಕಂಡ ಹತ್ತು ಹಲವು ಜನ ಅಧಿಕಾರಿಗಳ ರೈತರ ವ್ಯಾಪಾರಿಗಳ, ಕಳ್ಳಕಾಕರ, ದರೋಡೆಕೋರರ, ದಂಗೆಕೋರರ, ರಾಜಪರಿವಾರದವರ, ಪೋಲೀಸರ, ಕಲಾವಿದರ, ಕತೆಯಾಗುವಂತೆ ರಚಿಸಿದ್ದಾರೆ. ಬೇರೆ ಬೇರೆ ಕ್ಷೇತ್ರಗಳಲ್ಲಿನ ಜನರು ಕೃತಿಯಲ್ಲಿ ಸ್ಥಾನಪಡೆದುಕೊಂಡಿದ್ದಾರೆ. ಕೃತಿಯು ಕೇವಲ ಸುಸಂಸ್ಕೃತರ ಕತೆಯಾಗದೆ ಹಳ್ಳಿಗಳಲ್ಲಿ ಬರುವ ಘಟಿಂಗರೂ, ಪುಂಡರೂ, ಪುಂಡರೂ, ಪೋಕರಿಗಳೂ, ಕೋಲೆಗಡುಕರೂ, ಇಲ್ಲಿ ಚಿತ್ರಿತರಾಗಿದ್ದಾರೆ. ರಾಮರಾವ್‌ರು ಪಾತ್ರ ಚಿತ್ರಣಗಳಲ್ಲಿ ಯಾವುದೇ ಭಿನ್ನಾಭಿಪ್ರಾಯಗಳು ತೋರಿದಂತಿಲ್ಲ. ಒಂದು ಪ್ರದೇಶದ ಜನಜೀವನದ ಮೇಲೆ ಬೆಳಕು ನೀಡುವ ಕೃತಿಯಾಗಿದೆ.

ಕೃತಿಯಲ್ಲಿನ ಪಾತ್ರಗಳು ಕುತೂಹಲವನ್ನೇ ಉಂಟುಮಾಡುತ್ತೇವೆ. ಬೇರೆ ಬೇರೆ ಪಾತ್ರಗಳಲ್ಲಿನ ವ್ಯಕ್ತಿಗಳ ಆತ್ಮಕಥೆ ಎಂಬಂತೆ ಭಾಸವಾಗುತ್ತದೆ. ದೇವರಸೇಗೌಡ, ತಂದ್ರೆಲಿಂಗ, ವೀಣೆ ಶೇಷಣ್ಣ, ಮುಂತಾದ ಹಲವು ವ್ಯಕ್ತಿಗಳ ಆತ್ಮಕಥೆಗಳ ಸಂಗ್ರಹವೆನ್ನುವಷ್ಟು ಸೋಜಿಗವನ್ನು ಹುಟ್ಟಿಸುತ್ತದೆ. ಸ್ವಾತಂತ್ರ ಪೂರ್ವದ ಜನಜೀವನ, ರಾಜಕೀಯ, ಸಾಮಾಜಿಕತೆಗಳ ಮೇಲೆ ಲೇಖಕರ ಕೃತಿಯ ಕಥಾವಸ್ತುವನ್ನು ಪೋಣಿಸುವ ಸೂತ್ರದಾರದಂತೆ ಕಾಣುತ್ತಾರೆ. ಕಥೆ, ಕಾದಂಬರಿ ವಿನ್ಯಾಸ ಕ್ರಮವನ್ನೇ ಹೋಲುವಂತೆ ರಚಿಸಿದ್ದಾರೆ.

ಕೃತಿಯ ಆರಂಭದಿಂದ ಕೊನೆಯವರೆಗೂ ಸ್ವಾರಸ್ಯಪೂರ್ಣ ಘಟನೆಗಳು ಸಾಕಷ್ಟು ರಚಿಸಿದ್ದಾರೆ. ಘಟನೆಗಳ ರಚನೆಯ ಜೊತೆಗೆ ವ್ಯಕ್ತಿ ಚಿತ್ರಣಗಳು ಮತ್ತು ಅನುಭವಕ್ಕೆ ಬಂದ ಹಾಸ್ಯ ಸನ್ನಿವೇಶಗಳನ್ನು ದಾಖಲಿಸಿದ್ದಾರೆ. ಕೃತಿಯಲ್ಲಿನ ಹಾಸ್ಯ ಸನ್ನಿವೇಶವೂ ಓದುಗರಲ್ಲಿ ಆಸಕ್ತಿಯನ್ನು ಪ್ರೇರೇಪಿಸುತ್ತದೆ. ಕೃತಿಯಲ್ಲಿ ಮಹಾರಾಜರು, ದಿವಾನರು, ಜಿಲ್ಲಾಧಿಕಾರಿಗಳು, ಅಧಿಕಾರಿವರ್ಗಗಳು, ಮೈಸೂರು ಸಂಸ್ಥಾನದ ಚಾರಿತ್ರಿಕ ಹಿನ್ನೆಲೆಯನ್ನು ಹೇಳುವಂತಿದೆ. ಕಲೆ, ಸಂಸ್ಕೃತಿ, ಸಂಗೀತ, ನಾಟಕ, ಜಾತಿಯತೆ, ಧರ್ಮಗಳು, ಜಾತ್ರೆಗಳು, ದಸರಾ ಉತ್ಸವ ಮುಂತಾದವುಗಳನ್ನು ದಾಖಲಿಸಿದ್ದಾರೆ ಒಟ್ಟಾರೆಯಾಗಿ 'ಕೆಲವು ನೆನಪುಗಳು' ಕೃತಿಯು ಮೈಸೂರು ಭಾಗದ ಸಾಂಸ್ಕೃತಿಕ ಮಹತ್ವವನ್ನು ಪರಿಚಯವನ್ನು ಮಾಡಿತ್ತದೆ.

'ಕೆಲವು ನೆನಪುಗಳು' ಹಲವು ದೃಷ್ಟಿಕೋನಗಳಿಂದ ನೆನಪುಗಳ ಸುಂದರ ಚಿತ್ರಣಗಳಂತೆ ಕಾಣುತ್ತದೆ. ಲೇಖಕರ ಅನುಭವಕ್ಕೆ ಬಂದ ಪಾತ್ರಗಳು ಸ್ಥಾನವಂಚಿತರಾಗಿಲ್ಲ. ಪ್ರತಿ ವ್ಯಕ್ತಿಗಳ ನಡುವಿನ ಸಂಬಂಧವನ್ನು ಪರಿಚಯಿಸುತ್ತಾ ಒಂದೊಂದು ವಿಶಿಷ್ಟ ಸಂದರ್ಭಗಳನ್ನು ಗುರುತಿಸುತ್ತಾರೆ. ಕೃತಿಯುದ್ದಕ್ಕೂ ಸಂತೋಷದ, ವಿಷಾದದ, ಆಶ್ಚರ್ಯದ, ಹಾಸ್ಯದ ಕತೆಗಳನ್ನು ಹೇಳುತ್ತಾ ಸಾಗುವುದೇ ವಿನ್ಯಾಸ ಕ್ರಮಕ್ಕೆ ಸಾಕ್ಷಿಯಾಗಿದೆ.

ರಾಮರಾವ್‌ರು ಕೃತಿಯ ವಿನ್ಯಾಸಕ್ರಮವನ್ನು ಗಮನಿಸಿದಾಗ ಹಿಂದಿನ ಕಾಲದ ಘಟನೆಗಳ ಕಥಾವಸ್ತು ಪ್ರಸ್ತುತ ಕಾಲಕ್ಕೂ ಅನ್ವಯವಾಗುವಂತಿವೆ. ಲೇಖಕರ ಅಧಿಕಾರಾವಧಿಯಲ್ಲಿ ಎದುರಾದ ಸಮಸ್ಯೆಗಳು,

ಪ್ರಸಿದ್ಧ ವ್ಯಕ್ತಿಗಳು, ಅಧಿಕಾರವರ್ಗಗಳು, ಅಧಿಕಾರಿಶಾಹಿಗಳು, ಘಟನೆಗಳು ಇಂದಿನ ವಾಸ್ತವತೆಯನ್ನು ನೆನಪಿಸುವಂತೆ ಮಾಡುತ್ತದೆ. ಭಿನ್ನ ಭಿನ್ನ ಸಂದರ್ಭಗಳನ್ನು ಒಟ್ಟುಗೂಡಿಸುವ ಅವರ ತಂತ್ರಗಾರಿಕೆಯ ಶೈಲಿಯೇ ಅನನ್ಯವಾದದ್ದು.

ಮೂಲತಃ ಸಾಹಿತಿಗಳಲ್ಲದ ರಾಮರಾವ್‌ರು ವಿನ್ಯಾಸ ಕ್ರಮದ ಗೋಜಿಗೆ ಹೋದವರಲ್ಲ. ಕೃತಿಯ ಪ್ರಾರಂಭದಲ್ಲಿಯೇ ಲೇಖಕರ ಮಾತುಗಳಿಂದ ಸ್ಪಷ್ಟವಾಗುತ್ತದೆ. "ನಾನು ಆಡುವ ಮಾತನ್ನೇ ಬರೆದರೆ ಸಾಕು, ನಾನು ಹೇಳುವ ಕಥೆಯಲ್ಲಿ ಸ್ವಾರಸ್ಯವಿದ್ದರೆ ಜನಗಳು ಪದಗಳ ರಿಕ್ತತೆಯನ್ನು ಕ್ಷಮಿಸುವರು. ಆ ನಂಬಿಕೆಯಿಂದಲೇ ಬರೆಯುತ್ತಿದ್ದೇನೆ" ಎಂಬುವ ಹೇಳಿಕೆಯಲ್ಲಿ ಕೃತಿ ರಚನೆಯ ಸಮಯದಲ್ಲಿನ ಲೇಖಕರ ಮನೋಭಾವವನ್ನು ತೋರುತ್ತಾರೆ. ಆಪ್ತರ ಪ್ರೇರಣೆಯಿಂದಾಗಿ ನೆನಪುಗಳನ್ನು ಸ್ವಾಭಾವಿಕವಾಗಿಯೇ ಬಿಚ್ಚಿಟ್ಟಿದ್ದಾರೆಯೇ ಹೊರತು ಸಾಹಿತ್ಯದ ರೂಪುರೇಷಗಳನ್ನು ಬಳಸಿದಂತೆ ಕಾಣುವುದಿಲ್ಲ. ಕೆಲವಾರು ಘಟನೆಗಳಲ್ಲಿ ಕಥಾ ವಿನ್ಯಾಸದ ಮಹತ್ವವನ್ನು ಮರೆದಿದ್ದಾರೆ.

### ನಿರೂಪಣಾ ವಿಧಾನ

ಬರವಣಿಗೆ ಕ್ಷೇತ್ರಕ್ಕೆ ಹೊಸಬರಾಗಿದ್ದ ನವರತ್ನರಾಮರಾವ್‌ರು ಸಾಹಿತ್ಯದ ರಚನೆಯನ್ನು ಕುರಿತು ಚಿಂತಿಸಿದ್ದವರಲ್ಲ. ಅವರ ಇಳಿವಯಸ್ಸಿನಲ್ಲಿ ನಿವೃತ್ತಿ ಅಧಿಕಾರಿಯೊಬ್ಬರು ಸಾಹಿತ್ಯದ ರಚನೆಗೆ ಮುಂದಾದಾಗ ಕೃತಿಯ ನಿರೂಪಣಾ ವಿಧಾನವೇ ಭಿನ್ನವಾಗಿದ್ದು ಸರಳವಾಗಿರುತ್ತದೆ. ನವೋದಯ ಮತ್ತು ನವ್ಯ ಕಾಲ ಘಟ್ಟದಲ್ಲಿ ಬರವಣಿಗೆ ಇಳಿದರು ಸಾಹಿತ್ಯದ ಭಾಷೆಯ ಗೋಜಿಗೆ ಹೊದವರಲ್ಲ, ಮೈಸೂರು ಭಾಗ ಸಾಮಾನ್ಯವಾದ ಕನ್ನಡ ಬಳಕೆಯನ್ನೇ ಕೃತಿಯ ನಿರೂಪಣಾ ವಿಧಾನವಾಗಬೇಕೆಂಬ ಹಂಬಲದಿಂದ ರಚಿಸಿ ಯಶಸ್ವಿಯಾಗಿದ್ದಾರೆ.

'ಕೆಲವು ನೆನಪುಗಳು' ಕೃತಿಯ ಭಾಷೆ ಬಳಕೆಯು ಪ್ರಮುಖವಾಗಿ ಓದುಗರ ಗಮನ ಸೆಳೆಯುತ್ತದೆ. ಸಾಮಾನ್ಯರು ಆಡುವ ಮಾತಿನ ಭಾಷೆಯು ತನ್ನ ಕೃತಿಯಲ್ಲಿ ಬಳಕೆ ಮಾಡಿರುವುದಾಗಿ ತಿಳಿಸಿದ್ದಾರೆ. ಕೃತಿಯು ಸಾಹಿತ್ಯದ ಮಟ್ಟಿಗೆ ಹೊಸತನವನ್ನೇ ಮೂಡಿಸಿದಂತಿದೆ. ಗ್ರಾಮೀಣ ಭಾಷೆಯ ಸೊಗಡು, ವಸಾಹತುಶಾಹಿಗಳ ಪ್ರಭಾವ, ಮೈಸೂರಿನ ಕನ್ನಡ ಭಾಷಾ ಬಳಕೆಯೇ ಪ್ರಧಾನವಾಗಿ ಕಾಣುತ್ತದೆ. ಸಾಮಾನ್ಯನು ಓದಿ ತಿಳಿದು ಆನಂದ ಪಡುವಂತಹ ವಿಶಿಷ್ಟ ಪದಗಳು ಕೃತಿಯಲ್ಲಿ ನಿರಂತರವಾಗಿ ಕಂಡುಬರುತ್ತವೆ. ಹಲವಾರು ಪ್ರಸಂಗಗಳನ್ನು ವಿವರಿಸುವಾಗ ಭಾಷೆಯಲ್ಲಿನ ವೈಶಿಷ್ಟ್ಯವಾಗಿ ಬಳಸಿಕೊಂಡಿದ್ದಾರೆ. ಲೇಖಕರು ಆಯ್ದುಕೊಂಡ ಸರಳ ಗದ್ಯ ಶೈಲಿಯು ಸಾಹಿತ್ಯಿಕವಾಗಿ ಮೂಡಿ ಬಂದಿದೆ. ಸಾಹಿತ್ಯದ ಗುಣಗಳಿಗೆ ಹೊಂದಿಕೊಳ್ಳುವ ಇವರ ಭಾಷಾ ಬಳಕೆ ಓದುಗರ ತಲೆದೂಗುವಂತೆ ಮಾಡಿದೆ.

ರಾಮರಾವ್‌ರು ಅಸಾಧಾರಣ ಪಂಡಿತರಾಗಿದ್ದು. ಫ್ರೆಂಚ್, ಇಂಗ್ಲೀಷ್, ಉರ್ದು, ಮರಾಠಿ, ಭಾಷೆಗಳಲ್ಲಿ ಪರಿಣಿತರಾಗಿದ್ದಾರೆ. ಇಂತಹ ಕಾರಣಗಳಿಂದಲೂ ಕೃತಿಯಲ್ಲಿ ಅನೇಕ ಅನ್ಯ ಭಾಷೆ

ಪದಗಳನ್ನು ಬಳಸಿಕೊಂಡಿದ್ದಾರೆ. ಹಲವಾರು ಪದಗಳ ಬಳಕೆಯ ಅತಿಯಾಗಿರುವಂತೆ ಕಂಡು ಬಂದರೂ ಕೃತಿಯ ನಿರೂಪಣಾ ವಿಧಾನಕ್ಕೆ ಪೂರಕವಾಗಿವೆ. ಮೂಲತಃ ಮರಾಠಿ ಮನೆತನದವರಾಗಿದ್ದ ಲೇಖಕರು ಮರಾಠಿ ಭಾಷೆಯ ಬಳಕೆಯನ್ನು ಹೆಚ್ಚಾಗಿ ದಾಖಲಿಸಿದ್ದಾರೆ. ಇಂಗ್ಲೀಷ್‌ನ ವ್ಯಾಮೋಹವು ಅವರಿಗೆ ಹೆಚ್ಚಾಗಿದ್ದರಿಂದ ಪದಗಳ ಬಳಕೆ ನಿರಂತರವಾಗಿ ಕಾಣುತ್ತೇವೆ. ಅಷ್ಟಾಗಿ ಕನ್ನಡವನ್ನು ಸಂಪೂರ್ಣವಾಗಿ ಅರಿಯದ ರಾಮರಾವ್‌ರು ಅನ್ಯಭಾಷಾಪದಗಳನ್ನು ನೆಚ್ಚಿಕೊಂಡಿದ್ದು ತಿಳಿದುಬರುತ್ತದೆ.

ಕೃತಿಯ ನಿರೂಪಣೆಯಲ್ಲಿ ಭಿನ್ನವಾದ ಘಟನೆಗಳು, ಪ್ರಸಂಗಗಳು ವ್ಯಕ್ತಿಪರಿಚಯ, ಸಂಸ್ಕೃತಿ, ಹಾಸ್ಯ, ಕಲೆ, ಸಂಗೀತ ಮುಂತಾದವುಗಳನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಇಂತಹ ಕಥಾವಸ್ತುವನ್ನು ಅರಿಯುವಾಗ ನವರಸಗಳಿಂದ ಕೂಡಿದ ಭಾವವೂ ಹೊರಹೊಮ್ಮುತ್ತದೆ. ಹಾಗಾಗಿಯೇ ಕೃತಿಯಲ್ಲಿ ಅನೇಕ ಪ್ರಸಂಗಗಳು ಕುತೂಹಲಕಾರಿಯಾಗಿವೆ. ಹಲವಾರು ಘಟನೆಗಳನ್ನು ಕಥೆಗಳನ್ನು, ವ್ಯಕ್ತಿಗಳ ಬೀಡಿ ಭಾಗಗಳು ಪುಟಪುಟಕ್ಕೂ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬರೆದಿದ್ದಾರೆ.

ಎಲ್ಲಾ ದೃಷ್ಟಿಗಳಿಂದ 'ಕೆಲವು ನೆನಪುಗಳು' ಕೇವಲ ಆ ಕಾಲದ ಕೆಲವು ಅಧಿಕಾರಿಗಳಿಗೆ ಸೀಮಿತವಾಗಿರದೆ ಒಂದು ಜನ ಜೀವನದ ಇತಿಹಾಸವೇ ಆಗಿದೆ. ನಮ್ಮ ಸಾಹಿತ್ಯ ಚರಿತ್ರೆಯಲ್ಲಿ ಮರೆಯಲಾಗದ ಒಂದು ಮೈಲಿಗಳಾಗಿ ನಿಲ್ಲುತ್ತದೆ. ಹಲವಾರು ಪಾತ್ರಗಳು, ಘಟನೆಗಳು ಕಳ್ಳತನಗಳು, ಕೋಟೆಗಳು, ಪ್ರಸಂಗಗಳು, ಕಲೆ, ಸಂಗೀತ, ಸಾಹಿತ್ಯ, ನಾಟಕ ಮುಂತಾದ ಹಲವು ವೈವಿಧ್ಯ ಪೂರ್ಣ ಚಿತ್ರಗಳನ್ನೊಳಗೊಂಡು ಚಿರಕಾಲ ನಮ್ಮ ಮನಸ್ಸಿನಲ್ಲಿ ಉಳಿಯುತ್ತದೆ.

## ೮೪ ವರ್ಷಗಳ ಯಾತ್ರಿಕನ ದಾರಿಯ ಮೊರೆ.

ಬಲುದೂರ ನಡೆದಿಹೆನು; ಬೆಂಡಾಗಿ ಬಳಲಿಹೆನು;
ಹಸಿವು ದಾಹಕು ಕೂಡ ಉಸಿರಿಲ್ಲವೆನಗೆ;
ಕೈ ಕಾಲುಗಳು ಸವೆದು ಕಡಿಯಾಗುಳಿದಿಹವು;
ತುಸು ಹೊತ್ತು ತಾಳಪ್ಪ, ಬರುವೆ ನನ್ನೊಡೆಯ.

ಮಳೆಯು ಸುರಿಯುತಲಿಹುದು; ಜಗಕೆ ಬೆಳಕು ಬೇಕು;
ಚಳಿಗಾಲಗಳ ತಡೆವ ಶಕ್ತಿ ಎನಗೆಲ್ಲಿ?
ಶಾಲು ಕಂಬಳಿ ಹೊದೆಯಬಲ್ಲವರಿಗೆ ಅವನು ಕೊಡು;
ನಿನ್ನಡಿಯ ಭಕ್ತಿಯನೆ ಹೊದಿಸು ನನಗೆ.

ಬಡ ಮುದುಕ ನಾ ನಿನ್ನ ಆಲಯಕೆ ಬರಲಾರೆ;
ಇರುವಲ್ಲೆ ಕರುಣಾಳು ಉಳಿಗವ ಸ್ವೀಕರಿಸು.
ನಿನ್ನ ದೇಗುಲ ಪೂಜೆ ಘೋಷವನು ಕಳಿಸೆನಗೆ;
ಎದ್ದು ಒಡನೆಯ ಎಲ್ಲ ಚಿಂತೆಯನು ಬದಿಗಿಟ್ಟು
ಆತ್ಮ ಭಾವದಿ ಬಂದು ಕಾಲ ಪಿಡಿವೆ.

-ನವರತ್ನ ರಾಮರಾವ್

* * *

# ಅಧ್ಯಾಯ - ಏಳು

## ಸಮಾರೋಪ

'ಕೆಲವು ನೆನಪುಗಳು' ಕೃತಿಯು ಕೇವಲ ಆತ್ಮಕಥೆಯಂತೆ ಕಂಡು ಬಾರದೆ ಅದು ಕಾದಂಬರಿಯಾಗಿಯೂ ಸಾಹಸಿಗನೊಬ್ಬನ ಜೀವನ ಯಾತ್ರೆಯಾಗಿಯೂ ಕಾಣುತ್ತದೆ. ಸಾಮಾನ್ಯವಾಗಿ ಆತ್ಮಕಥೆಗಳಲ್ಲಿ ಸಹಜ ಜೀವನವನ್ನು ಕಾಣತ್ತೇವೆ. ಲೇಖಕರು ಜೀವನ ಯಾತ್ರೆಯ ಆಪತ್ತಿನಿಂದ ಕೂಡಿದ ಸಾಹಸಿಗನಂತೆ ಮತ್ತು ಪತ್ತೆದಾರಿ ಕತೆಯಂತೆ ಕಂಡುಬರುತ್ತಿದ್ದು, ಸಾಹಸಿಗರು ಹಲವು ಘಟನೆಗಳನ್ನು ಜಯಿಸಿಕೊಂಡು ಬಂದವರಂತೆ ಕಾಣುತ್ತಾರೆ. ಅಧಿಕಾರಿ ಜೀವನವೋ? ಸಾಹಸಿಗನ ನಿತ್ಯ ಜೀವನವೋ? ಎನ್ನುವಂತಹ ಪ್ರಶ್ನೆ ಕಾಡುವುದರಲ್ಲಿ ಸಂಶಯವಿಲ್ಲ.

ಲೇಖಕರು ವೈಯಕ್ತಿಕವಾದ ಜೀವನವನ್ನು ಬರೆದುಕೊಂಡರಾದರೂ ಇದರ ಕಥನ ಕ್ರಮ, ಪಾತ್ರಗಳ ವೈಶಿಷ್ಟ್ಯತೆಯು ಕಾದಂಬರಿಗಳಲ್ಲಿ ಹಾಯ್ದಂತೆ ನೋಡುತ್ತೇವೆ. ಅನೇಕ ಪಾತ್ರಗಳನ್ನು ಕೃತಿಯಲ್ಲಿ ಹೇಳುವ ಮೂಲಕ ಜೀವತುಂಬಿದ್ದಾರೆ ಹಾಸ್ಯ ಪ್ರಸಂಗಗಳು, ಕಳ್ಳತನ, ದರೋಡೆ, ಸಾಮಾನ್ಯರ ಜೀವನಾನುಭವಾಗಿದೆ. ಹಲವು ಘಟನೆಗಳ ವ್ಯಕ್ತಿಗಳ ಆತ್ಮಕಥೆಯಾಗಿಸಿದ್ದಾರೆ. ಸಾಹಿತಿಗಳಲ್ಲದವರಾಗಿಯೂ ಕಾದಂಬರಿಯಲ್ಲಿನ ವೈಶಿಷ್ಟ್ಯತೆಗಳನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಲಾಗಿದ್ದು, ಸಮಾಜದಲ್ಲಿ ಉನ್ನತ ವ್ಯಕ್ತಿತ್ವದ ಸ್ಥಾನದಲ್ಲಿ ನಿಂತಾಗ ಸಾಮಾನ್ಯರನ್ನು ಮರೆತು ರಚಿಸುವುದೇ ಬಹುತೇಕ ಆತ್ಮಕಥೆಗಳಲ್ಲಿ ಕಾಣುತ್ತೇವೆ. ರಾಮರಾವ್ ಅವರು ಅನೇಕ ಸಣ್ಣಪುಟ್ಟ ಪಾತ್ರಗಳ ಜೀವನವನ್ನು ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಸಮಾಜ ಮತ್ತು ಅಧಿಕಾರಗಳ ನಡುವಿನ ಬಾಂಧವ್ಯಗಳನ್ನು ತಿಳಿಸುತ್ತಾರೆ. ಈ ಮೂಲಕ ಉನ್ನತ ಅಧಿಕಾರಿಯೊಬ್ಬರು ಸಾಮಾನ್ಯ ಜನರೊಂದಿಗೆ ಬೆರೆಯುವ ಸ್ಥಿತಿಗತಿಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ವಸಾಹತುಶಾಹಿ ಕಾಲದ ರಾಜಕೀಯ, ಸಾಮಾಜಿಕ, ಚಾರಿತ್ರಿಕ ಸ್ಥಿತಿಗತಿಗಳನ್ನು ಕೃತಿಯುದ್ದಕ್ಕೂ ಕಾಣಬಹುದಾಗಿದೆ. ಅಧಿಕಾರ ವರ್ಗ ಮತ್ತು ಅಧಿಕಾರ ಶಾಹಿಗಳ ನಡುವೆ ಇರುವ ಭಿನ್ನತೆಗಳನ್ನು

ಗುರುತಿಸಿದ್ದಾರೆ. ಸ್ವಾತಂತ್ರ್ಯ ಕಾಲದಲ್ಲಿ ಬ್ರಿಟೀಷರನ್ನು ನೋಡುವ ದೃಷ್ಟಿಕೋನಗಳು ಅವರೊಂದಿಗಿನ ಆಡಳಿತ ಕ್ರಮ ಜನರೊಂದಿಗೆ ಬಾಂಧವ್ಯಗಳನ್ನು ತಿಳಿಸುವ ಕೃತಿಯಾಗಿಸಿದ್ದಾರೆ. ಲೇಖಕರ ಕೃತಿಯಲ್ಲಿ ಗುರುಕಾರರು ದೇವರಸೇಗೌಡ, ತಂದ್ರೆಲಿಂಗ ತಕ್ಸೀರು ನಂತಹ ಕತೆಗಳಲ್ಲಿ ಕಾನೂನಿನ ನಡುವಿನ ಭಿನ್ನತೆಗಳನ್ನು ಗುರುತಿಸಲಾಗಿದೆ. ಆ ಕಾಲದ ಪ್ರಾಂತೀಯ ಸರ್ಕಾರ ಮತ್ತು ಬ್ರಿಟೀಷರ ಆಡಳಿತ ಕ್ರಮಗಳನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

`ಕೆಲವು ನೆನಪುಗಳು` ಕೃತಿಗಳಲ್ಲಿ ಲೇಖಕರ ಜೀವನ ವಿವರವಾಗಿ ಕಲೆ, ಸಂಗೀತ, ನಾಟಕ, ಧಾರ್ಮಿಕ, ಹಾಸ್ಯ, ಚರಿತ್ರೆ, ಜನಪದ, ಪರಿಸರಗಳಂತಹ ಸಾಂಸ್ಕೃತಿಕ ಮಹತ್ವವನ್ನು ಸಾರುವ ಕೃತಿಯಾಗಿಸಿದ್ದಾರೆ. ಆತ್ಮಕಥೆಗಳಲ್ಲಿ ಇಂತಹ ವಿಚಾರಗಳನ್ನು ದಾಖಲಿಸಿದ್ದು ತೀರವಿರಳವಾಗಿದೆ. ಲೇಖಕರು ಮೈಸೂರಿನ ವಿಭಿನ್ನ ಸಂಸ್ಕೃತಿಯನ್ನು ಕೃತಿಯಲ್ಲಿ ದಾಖಲಿಸಿ ಚಾರಿತ್ರಿಕತೆಯನ್ನು ಬಿಂಬಿಸುವಂತಹ ಅಂಶಗಳಿಂದ ಕನ್ನಡಿಯಂತೆ ಗೋಚರವಾಗುತ್ತದೆ ಎಂಬುದನ್ನು ಈ ಅಧ್ಯಯನದಿಂದ ನೋಡಲಾಗಿದೆ.

ಪ್ರಾಂತೀಯ ಸರ್ಕಾರದ ಆಡಳಿತಗಾರರಾಗಿದ್ದ ಲೇಖಕರು ಸಮಾಜದಲ್ಲಿ ನಡೆಯುವ ಘಟನೆಗಳಿಗೆ ಸಾಕ್ಷಿಯಾಗಿದ್ದಾರೆ. ಹಲವಾರು ಪ್ರಸಂಗಗಳಲ್ಲಿ ನ್ಯಾಯ ತೀರ್ಮಾನದ ಸಮತೋಲನವನ್ನು ನಿವೃತ್ತಿಯ ವರೆಗೂ ಕಾಯ್ದುಕೊಂಡಿರುವ ಅವರ ಮನೋಭಾವ ಮೆಚ್ಚುವಂತದ್ದು, ವಸಾಹುತುಶಾಹಿಯ ಕಾನೂನು ಮತ್ತು ರಾಜ ಮನೆತನದ ಸಂಪ್ರದಾಯಿಕ ಕಾನೂನುಗಳ ನಡುವೆ ಅವರ ವಿಚಾರ ಶೀಲ ಮನೋಭಾವವನ್ನು ತೋರುತ್ತದೆ. ಹೀಗಾಗ ಇಡೀ ಕೃತಿಯ ಘಟನೆಗಳಲ್ಲಿ ಹಿಂದಿನ ಕಾನೂನು ವ್ಯವಸ್ಥೆಯನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಕೃತಿಯಲ್ಲಿನ ಭಾಷೆಯು ಬಹುಮುಖ್ಯವಾಗುತ್ತದೆ. ಮೈಸೂರು ಕನ್ನಡವನ್ನು ಬಳಸಿಕೊಂಡ ರೀತಿ ಅವರ ವಿದ್ವತ್ತಿಗೆ ಸಾಕ್ಷಿಯಾಗಿದೆ. ಇಡೀ ಕೃತಿಯ ಭಾಷಾ ಬಳಕೆಯಲ್ಲಿ ಫ್ರೆಂಚ್, ಇಂಗ್ಲೀಷ್, ಮರಾಠಿ, ಉರ್ದು, ಸಂಸ್ಕೃತ ಪದಗಳನ್ನು ಬಳಸಿದ್ದರು. ಕೃತಿಯ ಭಾಷೆಯು ಸಾಹಿತಿ. ಭಾಷಾ ವಿದ್ವತ್ತನ್ನೇ ಪರಿಚಯಿಸುತ್ತದೆ. ಕೃತಿಯ ಗದ್ಯದ ಬೆಡಗು ವಿಶಿಷ್ಟವಾಗಿದೆ. ರಾಮರಾವ್‌ಅವರ ಸಮಕಾಲೀನ ಸಾಹಿತಿಗಳಾದ ಮಾಸ್ತಿ, ಕುವೆಂಪು, ಬೇಂದ್ರೆ, ಕಾರಂತರಂತಹ ಭಾಷಾ ವಿಶೇಷತೆಯನ್ನೇ ಲೇಖಕರು ಬಳಸಿರುವುದು ಈ ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

ಲೇಖಕರು ಸಮಾಜದಲ್ಲಿ ಗಣ್ಯವ್ಯಕ್ತಿಗಳನ್ನು ಪರಿಚಯಿಸುವ ಜೊತೆಗೆ ಕಳ್ಳತನ ಪ್ರಕರಣಗಳು ಕೃತಿಯಲ್ಲಿ ರಚಿಸಿದ್ದು ಪ್ರಧಾನವೆನಿಸದೆ ಇರಲಾರವು. ತಂದ್ರೆಲಿಂಗ, ಪೋಲಿಸಾಂಬ, ಕೇಡಿ ರಾಮಲಿಂಗ, ದೊಡ್ಡ ಹೈದ, ಗಂಟಿಚೌಡಿಯರು ಮತ್ತು ಪಾಮಲೋರರ ಪಾತ್ರಗಳನ್ನು ನೋಡುವ ದೃಷ್ಟಿಕೋನಗಳು ಅವರ ಮನೋಭಾವವನ್ನು ತೋರಿಸುತ್ತದೆ. ಹಿಂದಿನ ಕಾಲದ ಕಳ್ಳತನಗಳನ್ನು ಆಧುನಿಕತೆಯಲ್ಲಿ ನಿಂತು ನೋಡುವ, ವಿವರಿಸುವ, ತೀರ್ಮಾನಿಸುವ ಅವರ ವಿಭಿನ್ನ ನೋಟಗಳನ್ನು ಈ ಅಧ್ಯಯನದಿಂದ ಕಂಡು ಕೊಳ್ಳಲಾಗಿದೆ.

## ಅಧ್ಯಯನದ ಸಾಧ್ಯತೆಗಳು

'ಕೆಲವು ನೆನಪುಗಳು' ಕೃತಿಯು ಅನೇಕ ವಿಷಯಗಳಿಂದ ಮಹತ್ವಪೂರ್ಣ ಕೃತಿಯಾಗಿಸಿದ್ದಾರೆ. ಇದರ ಅಧ್ಯಯನದ ವಿಧಾನಗಳು ಬದಲಾಯಿಸಿದಂತೆಲ್ಲ ಹೊಸತನದ ದೃಷ್ಟಿಕೋನಗಳಿಂದ ಅಧ್ಯಯನ ಮಾಡಲು ಸಾಧ್ಯವಾಗುತ್ತದೆ. ಕೃತಿಯನ್ನು ಕೇವಲ ಸಾಹಿತ್ಯಕವಾಗಿ ನೋಡದೆ ಸಾಮಾಜಿಕವಾಗಿ, ರಾಜಕೀಯವಾಗಿ, ಚಾರಿತ್ರಿಕವಾಗಿ ಮುಂತಾದ ವಿಧಾನಗಳಿಂದಲೂ ಅಭ್ಯಾಸಿಸಿದ್ದಾಗ ಹೊಸ ಅಭಿವ್ಯಕ್ತತೆ ಪಡೆಯಲು ಸಾಧ್ಯವಾಗುತ್ತದೆ.

ಕೃತಿಯನ್ನು ವಿವಿಧ ರಂಗಗಳಲ್ಲಿ ನಿಂತುನೋಡುವವರಿಗೆ ಭಿನ್ನ ಅಧ್ಯಯನಗಳನ್ನು ಮಾಡಲು ಸಾಧ್ಯ. ಚರಿತ್ರೆಯವರು ಇತಿಹಾಸ ಕಟ್ಟಲು, ಸಮಾಜಶಾಸ್ತ್ರದವರು ಸಾಮಾಜಿಕತೆಯನ್ನು ಗುರುತಿಸಲು ರಾಜ್ಯಶಾಸ್ತ್ರದವರು ಆ ಕಾಲದ ರಾಜಕೀಯತೆಯನ್ನು ನೋಡ ಬಯಸುತ್ತಾರೆ. ಸಾಹಿತಿಯು ಕತೆಯನ್ನು ಬಿಂಬಿಸುತ್ತಾನೆ. ರಾಮರಾವ್ ಅವರು ಇಡೀ ಕೃತಿಯನ್ನು ಒಂದು ದೃಷ್ಟಿಕೋನದಿಂದ ರಚಿಸಿದಂತೆ ಕಂಡು ಬಂದಿಲ್ಲ. ವಿವಿಧತೆಯಲ್ಲಿ ಏಕತೆ ಎಂಬಂತೆ ಇವರ ಕಥನಕ್ರಮ ಕೃತಿಗೆ ವಿಶಿಷ್ಟ ಬೆಲೆಯನ್ನು ತಂದುಕೊಟ್ಟಿದೆ. ಹೀಗಾಗಿ ವಿಭಿನ್ನ ದೃಷ್ಟಿಕೋನದ ಮೂಲಕ ಕೃತಿಯನ್ನು ಅಧ್ಯಯನ ಮಾಡಬಹುದಾಗಿದೆ. ರಾಷ್ಟ್ರ ಮತ್ತು ರಾಜ್ಯ ಇತಿಹಾಸವನ್ನು ಅರಿತವತರಿಗೆ ಪ್ರಾಂತೀಯ ಇತಿಹಾಸದ ನೆಲೆಗಟ್ಟನ್ನು ಗುರುತಿಸಬಹುದಾಗಿದ್ದು ಸಾಮಾಜಿಕ ಪರಿಚಲನೆಯ ವಿವಿಧ ಆಯಾಮಗಳು ಕೇವಲ ನಾಟಕೀಯವಾಗಿ ಅಲ್ಲದೆ ನೈಜತೆಯ ಬಂಧನ ಏರ್ಪಟ್ಟಿರುವುದು ಸಹಜವೆಂಬಂತೆ ಈ ಅಧ್ಯಯನದಿಂದ ನೋಡಬಹುದಾಗಿದೆ.

ರಾಮರಾವ್‌ರ ಈ ಕೃತಿಯು ಇನ್ನಿತರ ಆತ್ಮಕಥೆಗಳಿಗಿಂತ ಹೇಗೆ ಭಿನ್ನವಾಗಿದೆ ಎಂಬುದನ್ನು ತೌಲನಿಕವಾಗಿ ನೋಡಿದಾಗ ಕಾಣದಾಗಿದ್ದ ಅದರ ವಿಭಿನ್ನ ಸಾಹಿತ್ಯಿಕ ಧಾರೆಗಳನ್ನು ಅರಿಯಲು ಸಾಧ್ಯವಾಗುತ್ತದೆ. ಆ ಕಾಲದ ಸಾಮಾಜಿಕ ಪರಿಸ್ಥಿತಿಯನ್ನು ಆಧುನಿಕತೆಯ ಹಂದರದೊಳಗೆ ಸೇರಿಸುವ ಪ್ರಯತ್ನ ಮಾಡಹುದಾಗಿದೆ. ಇದು ಕೇವಲ ಸ್ಥಳೀಯ ನೆಲೆಗಳಲ್ಲದೆ ಬದುಕಿನ ಬವಣೆಗಳ ಬಹುದೊಡ್ಡ ಜವಾಬ್ದಾರಿಗಳನ್ನು ನವಿರಾಗಿ ಮುನ್ನೆಡೆಸುವ ಆಲೋಚನ ಕ್ರಮಗಳನ್ನು ಗುರುತಿಸುವಂತೆ ಮಾಡುವ ಸಾಧ್ಯತೆಗಳು ಹೆಚ್ಚಾಗಿ ಕಾಣಬಹುದಾಗಿದೆ.

ಕನ್ನಡ ಭಾಷಾ ಬಳಕೆಯಲ್ಲಿ ಲೇಖಕರ ವಿನಯಗಾರಿಕೆಯನ್ನು ಒಪ್ಪುವುದು ಅಸಹಜತೆಯನ್ನು ತೋರುತ್ತದೆ. ಕೃತಿಯ ಭಾಷಾ ಬಳಕೆ ಲೇಖಕರಲ್ಲಿದ್ದ ಸಾಹಿತ್ಯದ ಹಿಡಿತವನ್ನು ಸ್ಪಷ್ಟಪಡಿಸುತ್ತದೆ. ಕೃತಿಯಲ್ಲಿ ಬಳಕೆಯಾಗಿರುವ ಭಾಷಾ ಶೈಲಿ, ತಂತ್ರಗಾರಿಕೆ, ವಿನ್ಯಾಸ ಕ್ರಮ, ನಿರೂಪಣಾ ವಿಧಾನ ಕಡೆಗೆ ಗಮನಹರಿಸಿ ಹೆಚ್ಚಿನ ಅಧ್ಯಯನ ಮಾಡಬಹುದಾಗಿದೆ. ಈ ಅಧ್ಯಯನದಲ್ಲಿ ಕೃತಿಯ ಭಾಷಾ ನಿರೂಪಣೆಯ ವಿಧಾನದ ಕಡೆಗೆ ಹೆಚ್ಚು ಗಮನಹರಿಸಲು ಸಾಧ್ಯವಾಗಿಲ್ಲ. ಆತ್ಮಕಥೆಗಳಲ್ಲಿ ಭಾಷಾ ಶೈಲಿ ವಿವಿಧ ದೃಷ್ಟಿಕೋನಗಳ ಕಥನ ಕ್ರಮ ಯಾವ ಸ್ವರೂಪ ಪಡೆದಿದೆ ಎಂಬುದನ್ನು ಮತ್ತಷ್ಟು ವಿವರವಾಗಿ ನೋಡಬಹುದಾಗಿದೆ.

# ಅನುಬಂಧಗಳು

೧. ನವರತ್ನ ರಾಮರಾವ್ ಅವರ ಸ್ವವಿವರಗಳು

೨. ಅಧ್ಯಯನಕ್ಕೆ ಒಳಪಡಿಸಿದ ಮೂಲ ಪಠ್ಯಗಳು

೩. ಅಧ್ಯಯನಕ್ಕೆ ನೆರವಾದ ಗ್ರಂಥಗಳು

## ಅನುಬಂಧ - ೧. ನವರತ್ನ ರಾಮರಾವ್ ಅವರ ಸ್ವವಿವರಗಳು

| | | |
|---|---|---|
| ಜನ್ಮ ದಿನಾಂಕ | : | ೨೭ ಮೇ ೧೮೭೭ |
| ಜನ್ಮ ಸ್ಥಳ | : | ಮೈಸೂರು |
| ತಂದೆ | : | ನವರತ್ನ ಬಾಲಕೃಷ್ಣರಾಯರು |
| ತಾಯಿ | : | ಬ್ರಹ್ಮಾಣಿಬಾಯಿ |
| ಮನೆತನ | : | ನವರತ್ನ |
| ಹೆಂಡತಿ | : | ಕಾಶೀಜಬಾಯಿ |
| ಪ್ರೌಢ ಶಿಕ್ಷಣ | : | ಲಂಡನ್ ಮಿಷನ್ ಸ್ಕೂಲ್, ನ್ಯಾಷನಲ್ ಕಾಲೇಜ್ |
| ಕಾನೂನು ಪದವಿ | : | ಮುಂಬೈ ಲಾ ಕಾಲೇಜ್ |
| ವೃತ್ತಿಗಳು | : | ಮೈಸೂರು ಸರ್ಕಾರದಲ್ಲಿ ಸುಬೇದಾರ, ಅಮಲ್ದಾರ, ಪ್ರೊಬೇಷನರಿ, ವಿವಿಧ ಇಲಾಖೆಯ ಅಧ್ಯಕ್ಷರು |
| ಬಿರುದುಗಳು | : | ರಾವ್‌ಬಹದ್ದೂರ್, ಬಹದ್ದೂರ್ ಅಮಲ್ದಾರ್, ಬೆಂಕಿ ನವಾಬ |
| ಪ್ರಶಸ್ತಿಗಳು | : | ಶ್ರೀ ಜಯಚಾಮರಾಜ ಒಡೆಯರಿಂದ 'ರಾಜಸೇವಾ ಪ್ರಸಕ್ತ' |
| ಕೃತಿಗಳು | : | 'ಕೆಲವು ನೆನಪುಗಳು', ಸಣ್ಣಕತೆಗಳು, ಷೇಕ್ಸ್‌ಪಿಯರ್ ನಾಟಕಗಳ ವಿಮರ್ಶೆ, ಟೇಲ್ ಅಂಡ್ ಟಬ್, ಮೈಸೂರು ಮದ್ರಾಸ್‌ಗಳ ಯುದ್ಧಕ್ಕೆ ಸಂಬಂಧ ಪಟ್ಟ ಲೇಖನಗಳು, ಆಕಾಶವಾಣಿಯಲ್ಲಿ ಮೂರು ಲೇಖನಗಳು |
| ಮರಣ | : | ೧೯೬೦ |

## ಅನುಬಂಧ - ೨. ಅಧ್ಯಯನಕ್ಕೆ ಒಳಪಡಿಸಿದ ಮೂಲ ಪಠ್ಯಗಳು

೦೧. ನವರತ್ನ ರಾಮರಾವ್, ಕೆಲವು ನೆನಪುಗಳು, ಕರ್ನಾಟಕ ಪ್ರೆಸ್, ಮೈಸೂರು, ೧೯೫೪

೦೨. ನವರತ್ನ ರಾಮರಾವ್, ಸಣ್ಣಕಥೆಗಳು, ಸಾಹಿತ್ಯ ಭಂಡಾರ, ಬೆಂಗಳೂರು, ೧೯೭೬

೦೩. ೩೫ ಸಣ್ಣ ಕತೆಗಳು, ಕಳ್ಳತನ ಕೆಲವು ಕಳ್ಳರು, ಮನೋಹರ ಗ್ರಂಥಮಾಲೆ, ಧಾರವಾಡ

೦೪. ನವರತ್ನ ರಾಮರಾವ್, ಆಕಾಶವಾಣಿಯಲ್ಲಿ ಪ್ರಸಾರಗೊಂಡ ಮೂರು ಲೇಖನಗಳು

## ಅನುಬಂಧ - ೩. ಅಧ್ಯಯನಕ್ಕೆ ನೆರವಾದ ಗ್ರಂಥಗಳು


೦೧. ಕನ್ನಡ ವಿಷಯ ವಿಶ್ವಕೋಶ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯

೦೨. ಕಡಿದಾಳ್ ಮಂಜಪ್ಪ, ನನಸಾಗದ ಕನಸು, ಕರ್ನಾಟಕ ಪ್ರೆಸ್, ಬೆಂಗಳೂರು

೦೩. ಕುವೆಂಪು, ನೆನಪಿನದೋಣಿಯಲ್ಲಿ, ಸಹ್ಯಾದ್ರಿ ಪ್ರಕಾಶನ, ಬೆಂಗಳೂರು, ೧೯೮೦

೦೪. ಗಿರಿಡ್ಡಿ ಗೋವಿಂದರಾಜ್, ಮರೆಯಬಾರದ ಹಳೆಯ ಕಥೆಗಳು, ಫ್ರಿಜನ್ ಬುಕ್ ಹೌಸ್, ಬೆಂಗಳೂರು

೦೫. ಗಿರಿಡ್ಡಿ ಗೋವಿಂದರಾಜ್, ಪ್ರಮಾಣು, ಹೊನ್ನೂರು ಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೦೬. ಗೋಪಾಲ ಕೃಷ್ಣ ಅಡಿಗ, ನೆನಪಿನ ಗಣಿಯಲ್ಲಿ, ಪ್ರಿಸಂ ಬುಕ್ಸ್, ಬೆಂಗಳೂರು, ೧೯೯೯

೦೭. ಚಂದ್ರಶೇಖರ್, ವಸಾಹತು ಕಾಲದಲ್ಲಿ ಕರ್ನಾಟಕ, ಕನ್ನಡ ಸಂಸ್ಕೃತಿ ಮತ್ತು ಇಲಾಖೆ, ಬೆಂಗಳೂರು, ೨೦೦೬

೦೮. ನರಸಿಂಹಯ್ಯ ಹೆಚ್, ಹೋರಾಟದ ಹಾದಿ, ನ್ಯಾಷನಲ್ ಕಾಲೇಜ್, ಬೆಂಗಳೂರು, ೧೯೯೫

೦೯. ನವರತ್ನ ಲಕ್ಷ್ಮಣ್, ನವರತ್ನ ರಾಮರಾವ್ ಕೆಲವು ನೆನಪುಗಳು, ಕರ್ನಾಟಕ ಪ್ರೆಸ್, ಮೈಸೂರು

೧೦. ನವರತ್ನ ರಾಜಾರಾಮ್, ನವರತ್ನ ರಾಮರಾವ್ ಒಂದು ನೆನಪು, ಕರ್ಮವೀರ ಪತ್ರಿಕೆ, ಮೇ ೨೦೦೮

೧೧. ನಾಗಲೋಟಿ ಮಠ, ಬಿಚ್ಚಿದ ಜೋಳಿಗೆ, ಅತ್ರಿಬುಕ್ ಹೌಸ್, ಬೆಂಗಳೂರು, ೨೦೦೩

೧೨. ಪುಟ್ಟಯ್ಯ ಬಿ.ಎಂ, ಆತ್ಮಕಥೆಗಳಲ್ಲಿ ಕರ್ನಾಟಕದ ಕಥೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೩. ಭೈರಪ್ಪ ಎಸ್.ಎಲ್, ಬಿತ್ತಿ, ಲಕ್ಷ್ಮೀ ಮುದ್ರಾಣಾಲಯ, ಬೆಂಗಳೂರು, ೧೯೯೬

೧೪. ಮಾಸ್ತಿ ವೆಂಕಟೇಶ ಅಯ್ಯಂಗಾರ್, ನವರತ್ನ ರಾಮರಾವ್, ಸುಬೋಧ ಮುದ್ರಣಾಲಯ, ಬೆಂಗಳೂರು, ೧೯೭೬

೧೫. ಡಾ.ಮೋಹನ ಕೃಷ್ಣ ರೈ, ವಸಾಹತು ಪೂರ್ವದಲ್ಲಿ ಮೈಸೂರು ನಗರಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೧೬. ರಹಮತ್ ತರೀಕೆರೆ. ಆತ್ಮಕಥೆಗಳಲ್ಲಿ ಗದ್ಯದ ಅಧೋಲೋಕ, ದೇಶಕಾಲ, ಲೇಖನ, ದೇಶಕಾಲ, ಸಂಚಿಕೆ ೧೪, ೨೦೦೮

೧೭. ಲಂಕೇಶ್ ಪಿ, ಹುಳಿಮಾವಿನ ಮರ, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೭

೧೮. ಶರಣಮ್ಮ ಆ ಗೋರೆಬಾಳ, ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆಗಳು, ದಲಿತ ಸಾಹಿತ್ಯ ಪರಿಷತ್, ಗದಗ, ೨೦೦೮

೧೯. ಶಾಮರಾಯ ತ.ಸು, ಸ್ವಸ್ತಿ, (ಸಂ) ಹಾ.ಮಾ.ನಾ, ಸಿ.ಪಿ.ಕೆ, ಟಿ.ವಿ.ವಿ, ಮೈಸೂರು ಪ್ರಿಟಿಂಗ್ ಅಂಡ್ ಪಬ್ಲಿಷಿಂಗ್ ಹೌಸ್, ಮೈಸೂರು, ೧೯೮೩

೨೦. ಶ್ರೀರಂಗ, ಸಾಹಿತಿಯ ಆತ್ಮಜಿಜ್ಞಾಸೆ, ಉಷಾ ಪ್ರಕಾಶನ, ಬೆಂಗಳೂರು, ೧೯೭೩

೨೧. ಶಿವರಾಮ್ ಕಾರಂತ, ಹುಚ್ಚು ಮನಸ್ಸಿನ ಹತ್ತು ಮುಖಗಳು, ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು, ೧೯೭೮

೨೨. ಹಿರೇಮಲ್ಲೂರ ಈಶ್ವರನ್, ವಲಸೆಹೋದ ಕನ್ನಡಿಗನ ಕಥೆ, ೨೦೦೮, ಧಾರವಾಡ

೨೩. ಹಿರೇಮಠ ಆರ್.ಸಿ, ಉರಿಬರಲಿ ಸಿರಿ ಬರಲಿ, ೧೯೯೫, ನಾಗನೂರು ರುದ್ರಾಕ್ಷಿಮಠ, ಬೆಳಗಾವಿ

